ಶ್ರೀಃ

ಶ್ರೀಗೋಪಾಲಕೃಷ್ಣಾಯ ನಮಃ ॥



# ಶ್ರೀಕೃಷ್ಣಪಾರಿಜಾತವು.

ರಾಗ ನಾಟಿ, ಝುಂಪೆತಾಳ.

ಜಯಸಾಗರಾತ್ಮ ಜಯ ಕುಂಕುಮಾಂಕಿತವಕ್ಷ । ಜಯ ಇಂದಿರಾಧರ ಅಮೃತಭಕ್ಷ ॥ ಜಯಗೋಪಕನ್ಯಕಾಕಾಮುಕಲೆಶಾಸ್ತ್ರಪ್ರಭೆ । ಲೋಟಿನೊಳು ತ್ರಿವಳಿಕುಕ್ಷ । ಜಯವನಧಿದಕ್ಷಾ ॥ ೧ ॥ ಜಯಪೀತವಾಸ ಸುವಿಲಾಸ ಭಕ್ತರಪೋಷ । ಜಯಸೋಳಸಹಸ್ರಸತಿಗೃಹವಾಸಾ । ಜಯ ಸತ್ಯಭಾಮೆರುಕ್ಮಿಣಿಮಂದಿರನಿವಾಸ । ಜಯಮಂದಹಾಸ ರವಿಕೋಟಿಪ್ರಕಾಶಾ ॥ ೨ ॥ ಜಲಕ್ರೀಡಕೊಳದಕೇಸರದ ಪನ್ನೀರವೋ । ಕುಳಿಮಯದನಾರಿಯರ ಪೊಳೆವತೋರಾ । ಮೊಲೆಗಳಿಗೆ ಪೊನ್ನಂಡೆಯಲ್ಲಿ ಚಿಮ್ಮುವ ನೀರ । ನಳಿನಾಕ್ಷಗೋಪಾಲನಗೆಮೊಗವಿಹಾರಾ ॥ ಜಯ ॥ ೩ ॥

ಶ್ರೀಃ ॥

ರಾಗ ಪಾಡಿ, ಆದಿತಾಳ.

ನಮೋಯೆಂಬೆ ಪಾರ್ವತಿತನಯಗೇ । ವಿಮಲಹೇಮವರ್ಣ ಕಮಲ ಪ್ರದಾಂಗಗೆ ॥ ಪಲ್ಲ ॥ ಗಜಮುಖ ಅರುಣಾಕ್ಷಾಯುಗಳಗೆ । ಸತತ । ವಿಜ ಯಚಂಚಲ ಕರ್ಣಕುಂಡಲಗೆ । ಚಲ್ವ । ಭುಜಗಭೂಷಣ ಅಭಯ ಹಸ್ತಗೆ । ಸಾಧು । ಸುಜನಪೋಷಕ ನಮ್ಮ ನಿಜವಕ್ರತುಂಡಗೆ ॥ ೧ ॥ ಹರಪುತ್ರಶಿರಿಯೇಕದಂತಗೆ । ಬೇಡಿ । ದೊರವ ಕೊಡುವ ಸತ್ಯವಂತಗೇ । ಬಿಡಾ । ದ್ವೊರವ ನಮ್ಮನು ಗುಣಶಾಂತಗೆ । ಜಗದಿ । ಮೆರೆವ ಲಂಬೋ ದರ ವಿಘ್ನರಾಜೇಂದ್ರಗೆ ॥ ೨ ॥ ಮುಕುಟವರ್ಧನ ದೈತ್ಯವಿಕಟಗೆ । ಕೀರ್ತಿ । ಪ್ರಕಟವಾಗಿದ್ದಾ ಚಲ್ವಸುಭಟಗೆ । ನಮ್ಮ । ಶಕಟಾರಿ ಗೋಪಾಲನ ಸದ್ಭ ಕ್ತಗೆ । ಮಂಕು । ವಿಕಟಾಮತಿಗೆ ಬುದ್ಧಿವೀವವಿನಾಯಕಗೆ ॥ ೩ ॥

ರಾಗ ತೋಡಿ, ಝಂಪೆತಾಳ.

ಶಾರದೆಯೆ ಕರುಣವಾರುಧಿಯೆ ಯನಗೆ । ಸಾರಾಂಶವಚನಗಳ ಕೊಟ್ಟು ಸಲಹುವ ತಾಯಿಯಾ ॥ ಪಲ್ಲ ॥ ಚಂದ್ರಕಿರಣವು ಪೋಲ್ವ ಚಲ್ವ ಯಳೆ ನಗೆಮೊಗ । ದಾಂಬೆ ನೀ ಸ್ವರ್ಣಬೊಂಬೆ । ಅಜಭವ ಮಹೇಂದ್ರ ರಿಂ ಪೂಜೆಗೊಂಬೆ । ನಾನು ನಿನ್ನ ಕಂದ ಯೆನ್ನಮತಿಗೆ ಸಾಕಾರಿಯಾ ಗಿರು ಯೆಂಬೆ ॥ ೧ ॥ ಸರಸಿಜಾದಳನೇತ್ರೆ ಸಾಮಜಕ ಸಮಯಾತ್ರೆ । ಪರಮಪಾವನ ಚರಿತ್ರೆ ನೀನೆ ಗತಿ ಸರ್ವರಿಗೆ ಜಗನ್ಮಿತ್ರೆ । ನಿನ್ನ ಕರುಣ ಅಂಬುಜಪಲ್ಲವಪಾಣಿ ಅಳಿಕುಂತಳೆಯೆ ನೀಲವೇಣಿ । ಭಜಕರನು ಪೊರೆದು ರಕ್ಷಿಸುವ ಬ್ರಹ್ಮಾಣಿ । ವ್ರಜರಾಜವಿಜಯಗೋಪಾಲನ ಸೊಸೆ ಮುದ್ದುವಾಣಿ ॥ ೨ ॥ ಶ್ರೀಃ ॥

ರಾಗ ಸೌರಾಷ್ಟ್ರ, ತ್ರಿಪುಟತಾಳ.

ಧರಣಿ ದೈತ್ಯರ ಭಾರಸರ್ವದ ಧರಿಸಲಾರದೆ ಧೇನುರೂಪವ । ಧರಿಸಿ ಕ್ಷೀರಾರ್ಣವಕೆ ಶ್ರೀಹರಿ ಸರಿಸಕೈತಂದೂ । ಪರಮ ದೈನ್ಯದಿ ಬಾಗಿ ಅಂ ಜಲಿ ಮೆರಸಿ ವಿನಯದಿ । ಸಿರಿವರನಪದ ಸರಸಿರೂಹಕೆ ಭಕ್ತಿಯಲಿ ಮಾಡಿದಳು ಬಿನ್ನಹವಾ ॥ ೧ ॥ ದನುಜಮದಗಜಸಿಂಹ ದನುಜಾರ್ಣ

ವಕೆ ಕುಂಭಜ । ದನುಜತಮರವಿ ದನುಜವಿಪಿನಕೆ ದಾವಾನಳ ದನು
ಜಾಹಿ ವೈನತೇಯಾ । ದನುಜಮೇಘಾನಿಲನೆ ನರಹರಿ ದನುಜಭಾರವ
ಪರಿಹರಿಸಬೇ । ಕೆನುತ ಪ್ರಾರ್ಥಿಸಿ ಬೇಡಿದಳು ಧರೆ ದನುಜದಲ್ಲಣನಾ ॥
॥ ೨ ॥ ಧರಣಿಗಭಯವನಿತ್ತು ಕಳುಹಿಸಿ । ಪರಮ ಪುರುಷನು ಭಕ್ತವ
ಶದಾ । ಬಿರಿದನಂಗೀಕರಿಸಿ ದೇವಕಿಯಲ್ಲಿ ಅವತರಿಸೀ ॥ ಕರಿವರದ ಶ್ರೀ
ಕೃಷ್ಣ ಬಾಲ್ಯದಿ । ತೊರೆದ ಮೊಲೆಗೊಟ್ಟವಳ ಶಕಟನ । ತರುವಯುರಡರ
ಲಿಂದಶಾಪವ ತರಿದನಾಕ್ಷಣಕೆ ॥ ೩ ॥ ಬಕಖರಾಸುರ ಮುಖ್ಯದಾನವ ।
ನಿಕರವನು ಸಂಹರಿಸಿ ಕಂಸನ । ಶಿಖೆಪಿಡಿದು ಎಳೆತಂದು ಸವರಿದ
ಕೋಟಿದಾನವರಾ ॥ ಭ್ರುಕುಟಿ ಬಂಧಿಸಿ ಬಂದ ಮಗಧನ । ಅಖಿಳಸೇನೆಯ
ಮುಣುಗಲದ್ದಿದ । ಪ್ರಕಟಮಾಡಿದ ದ್ವಾರಕಿಯ ಸಾಗರದ ಮಧ್ಯದಲಿ ॥
॥ ೪ ॥ ಚಂದದಿಂದೆತಾಯಿದೇವಕಿ । ತಂದೆವಸುದೇವಾದಿ ಯದುಕುಲ ।
ವೃಂದ ಬಲರಾಮಾದಿ ಭುಜಬಲ । ಬಂಧುಜನಸಹಿತ ॥ ಸ್ಯಂದನದಿ ಗಜ
ತುರಗಸುಭಟರ । ಸಂದಣಿಯ ಸೌಭಾಗ್ಯದೊಳು ಅರವಿಂದನಯನಮು
ರಾರಿ ದ್ವಾರಕಿಯಲ್ಲಿ ರಂಜಿಸಿದಾ ॥ ೫ ॥ ಸರಸಿರುಹದಳನೇತ್ರೆರುಕ್ಮಿಣಿ ।
ಅರಸಿ ಸತ್ರಾಜಿತಕುಮಾರಿಯು ವೆರಸಿ ಅಷ್ಟೈಶ್ವರ್ಯ ಭೋಗದೊಳತಿ
ವಿಲಾಸದಲಿ ॥ ಸರಸಸಲ್ಲಾಪದಲಿ ಸುಖವನು ಭರಿತದಲಿ ವುತ್ಕೃಷ್ಟ ಜಯ
ದೊಳ । ಗಿರುತಲಿರೆ ಶ್ರೀಕೃಷ್ಣ ದ್ವಾರಕಿಯಲ್ಲಿ ರಂಜಿಸಿದಾ ॥ ೬ ॥
ನೀಲೆಭಪ್ರೆ ಮಿತ್ರೆರೊಂದಿಗೆ । ವಾಲಿಸಿದವರನಾ ಸಹಿತದಿಂ । ದಾಳಿದನು
ಕಾಳಿಂದಿ ಲಕ್ಷಣೆಯರನು ಮದುವ್ಯಾಗೀ ॥ ತೋಳಬಲುವಿಲಿ ತಂದ
ಮಣಿಸಹಿ । ತಾಳಿಜಾಂಬವತಿಯನು ಕೃಷ್ಣ । ಕಾಳಾಹಿವೇಣಿಯರೀರ್ವ
ರನು ಮೋಹಿಸಿದ ಕ್ರಮದಿಂದಾ ॥ ೭ ॥ ಒಂದುದಿನ ನಾರದನು ಹರು
ಷದಿ । ಇಂದ್ರಲೋಕದ ಪಾರಿಜಾತವ । ತಂದು ಕುಸುಮವನೊಂದು
ದೇವಕಿ ಕಂದಗೀವೆನೆಂದು ॥ ಸಂದಟಿತ ಶ್ರೀತುಲಸಿಮಾಲೆಯ ಕಂಧರವ
ಲೊಲುವುತ್ತ ಶಿರದಲಿ । ಬಂಧಿಸಿದ ಜಟೆ ಗೋಪಿಚಂದನ ನಾಮಗಳ
ನಿಟ್ಟ ॥ ೮ ॥ ಅಂದದಲಿ ವೀಣೆಯನು ಮಿಾಟುತ । ಸಿಂಧುಶಯನನ
ಸ್ತುತಿಸುತಲಿ ನಭ । ದಿಂದಿಳಿದನು ಮಂದರೋದ್ಧರನಿದ್ದ ದ್ವಾರಕಿಗೇ ॥

ನಂದಗೋಪಿಯಕಂದ ಮನದಲಿ । ಬಂದ ಮುನಿಪನ ಬಗೆಯ ತಿಳಿದನು ಮುಂದೆ ಕಲಹವನಿಕ್ಕಿನೋಡುವನೆಂದು ಭಾವಿಸಿದಾ ॥ ೯ ॥ ಶ್ರೀಃ ॥

ರಾಗ ಸಾರಂಗ, ಆದಿತಾಳ.

ಅರಸಿರುಕ್ಮಿಣಿಕೂಡ। ಅಂಬುಜಾಯಾತಾಕ್ಷಾ। ಹರುಷಾದಿಂದಿರುತಿರೆ। ಆರಸೀನಾರದನೂ ॥ ಬರುತೀರೆ ಕೃಷ್ಣ ಕಣ್ದೆರೆದೂ ಪೀಠವನೂ । ತರಿಸಿ ಮುನಿಪನ ಕುಳ್ಳಿರಿಸಿ ಮನ್ನಿಸಿದಾ ॥ ೧ ॥ ಎತ್ತಾಲಿಂದಲಿ ಬಂದೀರೆಲ್ಲ ಕಾರ್ಯವು ತಂದಿ । ರುತ್ತಾರೊತ್ತರವೆ ಹದಿನಾಲ್ಕೂ ಲೋಕವನು ॥ ಸುತ್ತೂವಿರ್ಪ್ಪೂಲೋಕ ತೆತ್ತೀಗರ್ನೀವೆಂದು । ಚಿತ್ತಜಪಿತನು ವಿನಯದಿಂದ ನುಡಿದಾ ॥ ೨ ॥ ಸಕಲಾ ಲೋಕಾಧಾರಿ ಸರ್ವಾಂತರ್ಯಾಮಿ । ಪ್ರಕಟಾ ನಿಮಗಲ್ಲೀ ತ್ರೈಲೋಕಾದ್ವಾರುತೆಯೂ ॥ ಮುಕುಟಾವರ್ಧನ ದೈವ ಕಾರ್ಯಂಗಳಿಗೆ ನೀಯಾ। ಮಕನಾಗಿಯೆನ್ನಾ ಸುತ್ತಿಸುವೆ ಜಗವೆಲ್ಲಾ ॥ ೩ ॥ ಶ್ರೀಃ ॥

ಸೀಸಪದ್ಯ.

ಅಜಭವಾದಿಗಳ ಆಲೋಚನೆಗೆ ಸಿಲ್ಕದವ। ವ್ರಜದವಧುಗಳಿಗೆ ಸಿಲ್ಕಿದೆಲೊ ನೀನು । ತ್ರಿಜಗ ಕುಕ್ಷಿಯೊಳಿಕ್ಕಿ ರಕ್ಷಿಸಿಕೊಂಬೆ ಗೋಪಿವಕ್ಷದಾಪಾಲುಂಡು ಜೀವಿಪೆಯೊ ಕೃಷ್ಣ ॥ ನಿಜಪೂರ್ಣಕಾಮಚಿತ್ತಜನ ಪಡೆದವಗೆ ಈ। ಗಜಗಮನೆಯರೊಳು ಮನ್ಮಥಕಲಾಪ॥ ಗಜರಾಜವರದ ಇದು ಲೀಲೆಯುಲ್ಲವೆ ನಿನ್ನ। ನಿಜವ ತಿಳಿದವರಾರು ನೀರಜಾಕ್ಷಾ॥ ೧ ॥ ಶಿಶುಪಾಲನಿಂದ ಸಿರಿದೇವಿ ಸಂರಕ್ಷಿಸಿದೆ । ಸರಸಿರುಹಭವ ಅಜಗೆ ನಿಗಮ ಹರಾಸುರನ ಕೊಂದೆ । ಭಸ್ಮಾಸುರನ ಬೂದಿಯಮಾಡ್ದೆ ಶಿವಗಾಗಿ । ಅಸಮಬಲಿಯನು ತುಳಿದೆ ಇಂದ್ರಗಾಗಿ ॥ ಶಶಿಮುಖೀ ದ್ರೌಪದಿಯ ಶಪಥಕ್ಕೆ ಕುರುವಂಶ । ಮಶಕಕ್ಕೆ ಸಮಮಾಡಿ ಸವರಿಬಿಟ್ಟೆ । ಕುಸುಮಶರ ಸಮ್ಯ ವಸುಧೆಯ ಭಾರನಿಳುಹುವಡೆ । ವಸುದೇವನುದರದಲಿ ಜನಿಸಿ ಬಂದೆ ॥ ೨ ॥ ಶ್ರೀಃ ॥

ರಾಗ ಸೌರಾಷ್ಟ್ರ, ತ್ರಿಪುಟತಾಳ.

ತಂದೆನೀಕುಸುಮವನು ಶೌರಿ ಮು । ಕುಂದ ಸುರಪನ ಲೋಕದಿಂದಲಿ । ಇಂದು ನಿಮ್ಮಯ ಚರಣಯುಗಳಕೆ । ಸಂದಿಸುವೆನೆಂದು ॥ ಮಂದಹಾಸ ಗೋವಿಂದ ಕರುಣಾ । ಸಿಂಧು ನೀಕೊಳ್ಳೆಂದು ನಾರದ । ನಂದಗೋಪನ ಸುತಗೆ ಕೊಟ್ಟನು । ನಯದಿ ನಸುನಗುತಾ ॥ ೧ ॥ ಎಸೆವುತಿರೆ ಕುಸುಮದಸುವಾಸನೆ । ಮಸಗಿ ಹರ್ಮ್ಯದೊಳೆಲ್ಲ ನಾರಿಯ । ರತಿಶಯವಿದೇನೆಂದು ಬಂದರು । ಕೃಷ್ಣನಿದ್ದೆಡೆಗೆ ॥ ಹಸುಳೆಯರು ತಮತಮಗೆ ಬೇಡುತ । ಕುಸುಮದಾಪೇಕ್ಷೆಯನು ಕೃಷ್ಣಗೆ । ಉಸುರಬೇಕೆಂತೆಂಬ ಸಮಯದಿ । ನಾರದನು ನುಡಿದಾ ॥ ೨ ॥ ಎಲೆ ಮುರಾಂತಕ ಪಾರಿಜಾತವು । ಸಲುವದೀರುಕ್ಮಿಣಿಗೆ ನೀನಿದ । ನೊಲಿದುಕೊಡು ಅನ್ಯರಿಗೆ ಲಭ್ಯವಿದಲ್ಲ ನೀನರಿಯಾ ॥ ಉಳಿದ ನಾರಿಯರಂತಿರಲಿ ತವ । ಲಲನೆ ಸತ್ರಾಜಿತಕುಮಾರಿಯು । ಛಲವಮಾಡುವಳಾಕೆಯನು ನೀ । ತಿಳುಹಿ ನೋಡೆಂದಾ ॥ ೩ ॥ ಶ್ರೀ ॥

ರಾಗ ಕಾಂಬೋಧಿ, ಆದಿತಾಳ.

ಮಾಡಿಯನೇವರಿಸಿ ಮುಂದಕೆ ಕರೆದು ರುಕ್ಮಿಣಿಯ । ತೊಡೆಯ ಮ್ಯೇಲಿಟ್ಟು ಮುದ್ದಿಸುತ ಮೊಗನೋಡುತ್ತ ॥ ಪಿಡಿದು ಗಲ್ಲವ ಕೈಯವಿಡಿದು ಕುಸುಮವ ಕೊಟ್ಟ । ಮಡದಿಯರು ನಿನಗಾರು ಸರಿಯೆ ಮೋಹದ ಸಿರಿಯೆ ॥ ನಡೆಯಲ್ಲಿ ಮದಕರಿಯೆ ಮುದ್ದುಸೌಂದರ್ಯೆ । ಬಡನಡುವಿನೊಯ್ಯಾರಿ ಗುರುಕುಚವಿಹಾರಿ । ಪಿಡಿಕರವ ಬಾರೆಯಲ್ಲರೊಳಧಿಕ ಭೀಷ್ಮಕ ಕುಮಾರಿ ॥ ೧ ॥ ಶ್ರೀಃ ॥

ರಾಗ ಕಾಂಬೋಧಿ, ಆದಿತಾಳ.

ಸಂತೋಷದಿಂದ ನಾರದ ಕಂತುವಿನ ಹೆತ್ತಾಯಿಗೆ । ಅಂತರಂಗದ ಮಾತುಗಳನಾಡುತಿದ್ದನೂ ॥ ಇಂತಿರಲೆಲ್ಲಾ ಊಳಿಗದಂತೆ ಸೇವಿಪರು ಇದ । ಕಿಂತಮೇಲುಮಾತು ಒಂದು ಕೇಳೆ ರುಕ್ಮಿಣಿ ॥ ೧ ॥ ಸರಿ ಗರತಿ ಸತ್ರಾಜಿತತರಳೆ ನಿನಗಂಜುವಳು । ಹರಿ ನಿನ್ನ ಮಂದಿರವ ಬಿಟ್ಟು

ಇರನೊಂದು ದಿನಾ ॥ ಹರಿಣಾಕ್ಷಿ ಪಾರಿಜಾತದ ಪರವಬಿಟ್ಟಿರಲಾಗದು । ಸರಿಯಾರು ನಿನ್ನ ನೋಡಿ ಧರಿಸಲಾರಾರೂ ॥ ೧ ॥ ಯೆಂದು ನಾರದನಪ್ಪಣೆಗೊಂಡು ತೆರಳಿಬರುತ । ಲ್ಲಿಂದ ಸತ್ಯಭಾಮೆಯ ಅರಮನೆಯ ಪೊಕ್ಕನು ॥ ಇಂದೀವರಾಕ್ಷಿ ಮುನಿಗೆ ವಂದಿಸಿ ಗದ್ದುಗೆಯನಿಟ್ಟು । ಬಂದಸುದ್ದಿ ಕುಳ್ಳಿರಿಸಿ ಕೇಳುತಿದ್ದಳೂ ॥ ೩ ॥ ಶ್ರೀಃ ॥

ರಾಗ ಪಾಡಿ, ಕುರಗ ಝಂಪೆತಾಳ.

ಶ್ರೀನಿನಂಬಲಿಕೂಡದವಮ್ಮಾ । ಮುರ । ವೈರಿ ಗುಣಗಳ ನೋಡಿ ಬೆರಗಾದೆನವಮ್ಮಾ ॥ ಪಲ್ಲ ॥ ದೇವತರುವಿನ ಕುಸುಮುವವಮ್ಮಾ । ನಾನು । ಭಾವಜನಪಿತಗೆ ಕೊಂಡುಬಂದಿದ್ದೆನವಮ್ಮಾ ॥ ಭಾವೆರುಕ್ಮಿಣಿಗಿತ್ತನವಮ್ಮಾ । ಆದ । ನ್ಯಾರರಿಯದ ತೆರದಿ ಬಚ್ಚಿಟ್ಟಳವಮ್ಮಾ ॥ ೧ ॥ ಎಷ್ಟುಗುಣವಾಕುಸುಮುಕುಂಟೂ । ಕೈಸೇರೆ । ಕೃಷ್ಣ ವಿಾರನು ಮಾತು ಎಳ್ಳುಕಾಳಷ್ಟೂ ॥ ಪಡ । ದ್ದುಟ್ಟಿದವರಿಗೆ ಲಭ್ಯವಷ್ಟೂ । ನಿ । ನ್ನಿಷ್ಟು ತಾತ್ಸಾರಮಾಡುವದೇನು ಸಿಟ್ಟೊ ॥ ೨ ॥ ಸರಿಯಲ್ಲವೆನೆ ರುಕ್ಮಿಣಿಗೆ । ನಿನ್ನ । ಇರುವಿಕೆಯ ನೋಡೆ ಸರಿಯಾಗದಿಂದಿರೆಗೆ ॥ ಹರಿಯಚಿತ್ತಾಗೆವವಿದ್ದಾಗೆ ಇದ್ದ । ಸಂಗರತಿಯೊಳು ಮಾನಕೆ ಸ್ವಲ್ಪಹಾಗೆ ॥ ೩ ॥ ತಾನೆಗತಿಯೆಂದು ಕಂಕಣವಹವ್ಯ । ವಾಹನನ ಸಾಕ್ಷಿಯಲಿ ಕಟ್ಟಿ ಕರವಿಡಿದವಮ್ಯಾಲೆ ॥ ನ್ಯೂನಪೂರ್ಣವು ತನ್ನದಲ್ಲೆ ಯೇನೆ । ಮಾನನಿಧಿ ನಿನ್ನಕೂಡಿದುಚಿತವಲ್ಲೆ ॥ ॥ ೪ ॥ ನಗಧರನು ಅವಾಗಲವಮ್ಮಾ । ಆಕೆ । ಅಗಲಿ ಒಂದರೆಘಳಿಗೆಯಿರಲಾರನವಮ್ಮಾ ॥ ಮೊಗವ ನೋಡುತಲಿಹನವಮ್ಮಾ । ನಿನ್ನ । ಹಗೆಯುಳನುಮಾಡಿಹ ಬಗೆಯಿದೇನವಮ್ಮಾ ॥ ೫ ॥ ತೊಡೆಯುಮ್ಯಾಲಿಟ್ಟು ಮುದ್ದಿಸುವಾ । ಅಕೆ । ಮುಡಿಯುದಡವುತ ಅಕ್ಕರದಿಂದ ಕರವಾ ॥ ಒಡೆಯಳೆನ್ನಯ ಭಾಗ್ಯಕೆಂಬಾ । ನಿನ್ನ । ಕಡೆಗಣ್ಣಲಿಂದ ನೋಡದಲಿಹನೆಂಬಾ ॥ ॥ ೬ ॥ ಹುಟ್ಟಿಯುನು ಮಧುರೆಯೊಳಗಿಟ್ಟಾ । ವ್ರಜದ । ಅಬ್ಜಲೋಚನೆಯರನು ಗೋಕುಲದಿ ಬಿಟ್ಟಾ ॥ ಅಬ್ಧಿಯೊಳು ನಿಮ್ಮ ತಂದಿಟ್ಟಾ । ಈಗ । ಉಬ್ಬಿಕಾರ್ಯನಾಗಿ ರುಕ್ಮಿಣಿಗೆ ಮನವಿಟ್ಟಾ ॥ ೭ ॥ ಚಾರಚೋರತೆಯಿಲ್ಲ

ಮರೆದಾ । ಗೋವ್ರುಗ । ಕೇರಿ ಅಡವಿಯನು ಸಂಚರಿಸುವದು ಮರೆದಾ ॥ ನಾರಿಗಿಷ್ಟಾರ್ಥವನು ಕರೆದಾ । ನಿನ್ನ । ಸೇರನ್ಯಾತಕೆ ಕೆಳದಿ ಹೇಳದೇನ ಎದಾ ॥ ೮ ॥ ನೀವು ನೀವೆಲ್ಲರೊಂದವನ್ಯಾ । ನಾವೆ । ಅತ್ತಿತ್ತತಿರುಗುವರೆ ಹೊರಗವನ್ಯಾ ॥ ದೇವ ರುಕ್ಮಿಣಿಗೊಲಿದನವನ್ಯಾ । ಆವದೊಂದಿದಕುಪಾಯವು ಚಿಂತಿಸವನ್ಯಾ ॥ ೯ ॥ ಹೋಗಿಬರುವೆನು ಸ್ಥಳಾಂತರಕೆ । ಎಂದು । ಯೋಗಿ ತೆರಳಿದನು ತಾನಿಂದ್ರಪುರಕೆ ॥ ಆಗ ಹುಟ್ಟಿತು ಅಬಲೆಮನಕೆ । ಮನೋ । ರೋಗ ಮನ್ಮಥನ ಉದ್ರೇಕ ದಿನದಿನಕೆ ॥ ೧೦ ॥ ಮುಳುಗಿ ಮಂಚದಲಿ ಮಲಗಿದಳೂ । ಕೃಷ್ಣ । ಹಳಿದನೇನೆಂದು ಮನದೊಳಗೆ ಬಳಲಿದಳೂ ॥ ಕೆಳದಿಯರ ಕರೆದು ಹೇಳಿದಳೂ । ನಿಮ್ಮ । ಉಳಿವಲ್ಲವೆಂದು ಆಜ್ಞೆಯ ನೇಮಿಸಿದಳೂ ॥ ೧೧ ॥ ಶ್ರೀಃ ॥

## ರಾಗ ಕಾಪಿ, ಆದಿತಾಳ.

ಮನಸು ಬಾರದೀಮಂಚಾ । ಮೃದುವಾಸನ । ಮುನಿದನೇತಕೊ ಕಾಂತಾ । ವನಜಸಂಭವನಲ್ಲೆ ಪಾರಿಜಾತವು । ನೆನಸಿತಂದಿತ್ತ ಮಾಡಿದನಾ ಕಾಂತಾ ॥ ಪಲ್ಲ ॥ ಈವುಪ್ಪರಿಗ್ಯಾಕೆ । ಈಚಿತ್ರದಹಾವಭಾವಸಾಕೆ ॥ ನೋವುದೆನ್ನ ದೇಹಾ ನಳಿನಶರಗಳಿಂ । ದಾವದುಪಾಯವೆ ಇಂದೀವರಾಕ್ಷಿ ॥ ೧ ॥ ಅಂದಚಂದಗಳ್ಯಾಕೆ । ಈದೇಹಕ್ಕೆ । ಗಂಧಲೇಪನಸಾಕೆ ॥ ಕುಂದಕುಸುಮ ಜಾಜಿಮಲ್ಲಿಗೆಸರವ್ಯಾಕೆ । ಮಂದರಧರಬೇಕೆ ಅಮ್ಮಯ್ಯಾ ॥ ೨ ॥ ಮಾತುಸೇರದಲ್ಲೆ । ನಿದ್ರಾಕ್ಷುಧೇ । ಯಾತುರಯೆನಗಿಲ್ಲೆ ॥ ನೂತನ ಕುಸುಮವು ನಾಥೆಗಿತ್ತಾ ಸುದ್ದಿ । ಘಾತಕಮುನಿಯೆನಗ್ಯಾತಕ್ಹೇಳದನೋ ॥ ೩ ॥

## ರಾಗ ಭೈರವಿ, ಅಟತಾಳ.

ಪತ್ರವ ಬರಿಯಲೋ । ನಾಥಗೆ । ಮಿತ್ರೆಯ ಕಳುಹಲೋ ವಿ । ಧಾತೃಜತಂದ ಪದಾರ್ಥವು ಬೇಕೆಂದು ॥ ಪಲ್ಲ ॥ ಸಂಧಾನಮಾಡಲೋ । ಛಲವುನಿ । ಬಂಧಿಸಿಮಾಡಲೋ ॥ ಕಂದರ್ಪನಯ್ಯನ ದಾರಿಯ ನೋಡಲೋ । ಕೆಳದಿಯಳೊಬ್ಬಳ ಬಿಡಲೋ ॥ ೧ ॥ ಆಲಸ್ಯವೆ ವಿಷವೋ । ಅಥವಾ

ವ್ರತಾವಳಿ ಹಾಸ್ಯವೋ । ಕಾಲಾನುಸಾರನಾ । ಕಂಡು ಕಾಣದಿರಲೊ
ಕಾಠಿನ್ಯವ ಮಾಡುತಿರಲೊ ॥ ೨ ॥ ತವಕಸಾಧನವೋ ಅಥವಾ । ತಾಳುವಿಕೆ
ಹದನವೋ ॥ ಗಮಕವ ಮಾಡಿ ನೋಡಲೋ । ಗೋಪಾಲನೆ ಗತಿಯೆ
ನ್ನಲೊ ॥ ೩ ॥ ಶ್ರೀ ॥

ರಾಗ ಕಾಂಬೋಧಿ, ರೂಪಕತಾಳ.

ಸಿರಿವಂತ ಧೀಮಂತರಹಿತಾದಿ ಮಧ್ಯಾಂತ । ಶ್ರೀವಧುವಿನ ಕಾಂತಾ ।
ಮಹಿಮೆ ಅನಂತಾ ॥ ಕಾಮನ್ನ ಗೆಲಿದಂಥ ಸೌಮ್ಯರೂಪಾವಂತಾ । ಕಾಮಿ
ನಿಯರ ವಲಿಸುವ ಬಲವಂತಾ ॥ ೧ ॥ ರಾಜಾರವಿನೇತ್ರಾ ಪ್ರಜರಾಜ
ಮಹಸಂವರ್ತ । ರಾಜಕುಲ ಸಂಹಾರ ರಾಜಕಂಠೀರಾ ॥ ರಾಜಮುಖಿ
ಯರೊಳು ರಾಜಿಸುತಿಹ ಪೃಥ್ವಿ । ರಾಜರಾಜರ ಗಂಡ ರಾಜಗೋ
ಪಾಲಾ ॥ ೨ ॥ ಪ್ರಾಣನಾಥನ ಪಾದ ರೇಣುವೀಸರಿ ಸತ್ಯಾ । ಭಾಮೆ
ಷಟ್ಪದರಾಣಿ ಪಾಣಿಪಲ್ಲವದಿ ಗೀ ॥ ವಾರ್ಣವಂದಿತ ನಿಮ್ಮ । ಪಾದ
ಪದುಮಕೆ ನಿತ್ಯಾ । ಮಾಣದೆ ಶರಣೆಂದು । ಬಿನ್ನಹವಾ ಮಾಡಿದಳೂ ॥
॥ ೩ ॥ ವಿಧಿಸುತನು ತಂದಿತ್ತ ಪಾರಿಜಾತದಕುಸುಮದಧಿಕದಾಪೇಕ್ಷೆಯಲ್ಲಿ
ಹುದೆನ್ನಾ ಮನಕೆ । ಯದುಕುಲಾತಿಲಕ ಎನ್ನಯ ಮೇಲೆ ದಯವಿಟ್ಟು ।
ಅದು ಕಳುಹಿದರೆ ಅತ್ಯಂತ ಪ್ರೇಮಹುದೂ ॥ ೪ ॥ ಅರಗಿಳಿಯ ಕುಂ
ಡಾದೊಳರಸಿ ಪತ್ರವ ಕೊಟ್ಟು । ಮುರಹರಗೆ ಮುಟ್ಟಿಸುವದೆಂದು ಕಳು
ಹಿದಳೂ ॥ ಹರಿದುಬಂದಾ ಗಿಳಿಯು ಹರಿಯಾ ಪಾದದಲಿಟ್ಟು । ಅರಿ
ಯಾದಂತಹರಿತು ಅಲ್ಲೆ ವೃಕ್ಷವನೂ ॥ ೫ ॥ ಶ್ರೀ ॥

ವಚನ.

ಅರಸಿ ಕಳುಹಿದ ಲಿಖಿತ ನೋಡಿ । ಸಿರಿದೇವಿಯರಸ ಚಿಂತಿಸಿ ತನ್ನ
ಮನದೊಳಗೆ । ಯ.ಲೆ ವಿರಿಂಚಿಯ ಕುವರ ನೀನಲ್ಲೆ । ಸುರಲೋಕ ಕುಸು
ಮೊಂದು । ಅರಸಿತಂದಿತ್ತ ಬಳಿಯರೊಳು ಕಲಾಪ ಬೆರಸಿ । ಜಾರಿದೆ ಈ
ಉಭಯಸವತ್ರಿತವ ದಾವಪರಿಯಲಿ ಮಾಡುವೆನು ಪರಮಪ್ರಮಾದವಿದು ।
ಎಳತು ಸುರಗಿಯನೊಂದು । ವರಿಯಲಿಟ ಪರುಂಟ । ಹರಿಣಾಕ್ಷಿಯರನು

ತಿಳಿಸುವರಾರು ಅಕಟಕಟಾ । ಧರೆಯ ಸೃಷ್ಟಿಸಬಹುದು ಪಾಲಿಸಬಹುದು ಪ್ರಳಯ । ಅತಿಮತಿಯಿಲ್ಲದೆ ಮಾಡಬಹುದು । ಸುರರಮುಂಡೆಹೂವು ಬಾಡದಲೆ । ಪೊರೆಯಲಾಪೆನು ಅಸುರರ ಪಡೆಯ । ಅರಿಯಲಾಪೆನು ಹಯಾಸ್ಯನ ಕೊಲುವದೇನು ಸಿರಿಯ ಭಾರವಿದೇನು ಧರೆಯ ತಾ ಹೋದೇನು । ಹರನೊರವ ಕೆಡಿಸಿ ಹಿರಣ್ಯಕಶ್ಯಪನ ಸೀಳುವದೇನು । ಧುರದಿ ಯಾಗವ ಮಾಡ್ದ ಬಲಿಯ ತುಳಿದವ ನಾನು । ಸುರಧೇನುವೈಬಂದ ಸಹಸ್ರಬಾಹುವ ತರಿದೆ । ಶರಧಿಬಂಧಿಸಿ ಹತ್ತುಶಿರಗಳನೆ ಚಂಡಾಡ್ದೆ ॥ ಕಾಲನೇಮಿಯ ಕೊಂದು ಮಗಧನುಪಟಳಕೆ । ಮಾರಾಂತು ಬೀಳಗೆಡಹಿದೆ ಹರನತ್ರಿಪುರವ ಗೆಲಿದೆ । ಹಯವನೇರಿ ಕಡಿದೆ ಸರಿಯಿಲ್ಲಸುರರೊಳಗೆ । ನರರ ಪಾಡೇನೂ । ಮರೆಹೊಕ್ಕರೆ ಕಾಯ್ವ ಬಿರಿದು ಎನಗುಂಟು । ಪರಮಪಂಚಪ್ರಾಣವಾಗಿಹ ಉಭಯ । ವರಮೋಹನಾಂಗಿಯರಿಗೊಶವಾದೆ । ಇನ್ನಿವರಿಗರುಹಿ ತಿಳಿಸುವದು ಅತಿಪ್ರಯಾಸಾ ॥

ರಾಗ ಭೈರವಿ, ಅಟತಾಳ.

ಉತ್ತರ ಬರಿಯಲೋ । ನಾಥಗೆ ಭೃತ್ಯರ ಕಳುಹಲೋ । ಇತ್ತ ಸತ್ರಾಜಿತಸುತೆಗೆ ನಾನು । ಚಿತ್ತಪಲ್ಲಟಮಾಡಬೇಡೆಂದು ॥ ಪಲ್ಲ ॥ ಅವಳಸಲಿಸಲೊ ನಾನಿ । ನ್ನಿವಳ ಸಲಿಸಲೊ ॥ ಹವಳದುಟಿಯ ಅಬಲೆಯಳಿಗೆ । ಹಲವು ಹಂಬಲಿಸಬೇಡೆಂದು ॥ ೧ ॥ ಹಂಬಲಕೆಳಸಲೊ । ಅಥವ ವಿಳಂಬದಿಂದೆಳೆಯಲೊ ॥ ಸಂಭಾವಿತವೊ ಅಸಂಭಾವಿತವೊ । ಡಂಬಕವನ್ನು ನಾ ಮಾಡಲೊ ॥ ೨ ॥ ಆಸೆಯ ಹಚ್ಚಲೊ ಅಥವಾ । ಮೋಸವ ನೆಚ್ಚಲೊ ॥ ದೂಷಣವಾಡಲಾ ಭಾಸಾಕೆ ಅಂಜಲೊ । ಹಾಸ್ಯವ ಮಾಡಿ ನಾ ಬಿಡಲೊ ॥ ೩ ॥ ಶ್ರೀಃ

ರಾಗ ಶಂಕರಾಭರಣ, ಆದಿತಾಳ.

ಪ್ರಾರಬ್ಧ ಕೆಲಸಕೆ । ನಾ ಚಿಂತಾಮಣಿ । ದೂರಲಾಗದು ಎನ್ನ ನಾರದನಭಯದಿಂದ । ತಂದಿತ್ತ ಕುಸುಮವು । ನಾರಿರುಕ್ಮಿಣಿಗೆ ನಾನಿತ್ತೆ ॥ ಪಲ್ಲ ॥ ಕೋಪವಿಂಚಿದ ಮೋರೆ [illegible] ತಾಳುಹುಬ್ಬುಲು [illegible] । ನಾರಿ

ತೊಡಕಿದ ಮೇಲೆ ॥ ಬಾಳುವವರು ತಪ್ಪಿದರೆ । ಬಾಳಿವೆ ವ್ಯರ್ಥ । ತೀರಾ ಗದವನ ಆಸಾರ್ಥ ॥ ೧ ॥ ಅಟ್ಟಿತಸವನಾಯಿ । ದವರುಂಟೆ ಲೋಕದಿ । ಕೊಟ್ಟಿಂದ ಕುಲವೆಣಿಸುವರೆ॥ ಬಿತ್ತೋಹದವತಪ್ಪಿ ಬಿತ್ತಿಬೆಳದವರುಂಟೆ। ಕೊಟ್ಟೆಣ್ಣು ತಿರುಗುವದುಂಟೆ ॥ ೨ ॥ ಮನೆಯದೀಪವು ಎಂದು । ಮುದ್ದು ಕೊಟ್ಟವರುಂಟೆ । ಕನಕಹಿಡಿಯು ಕಠಾರಿಯನು ॥ ಘನಪ್ರೀತಿಯುಳ್ಳರೆ । ಹೊಟ್ಟೆಯೊಳಿಡುವರೆ । ಅನುಚಿತ ಬುದ್ಧಿಮಾಡುವರೆ ॥ ೩ ॥ ನೋಯಿ ಸಬಾರದು । ನೋಯುಬಾರದು ಅಂತ । ಭಾರ್ಗವ ತಿಳಿವವಳಿನಾಯಕಿಯೂ ॥ ಆಯಾಸಗೊಳಬೇಡ । ಅಬಲೆ ನಿನ್ನಾಣೆ । ಸಂಯೋಗಕಾಲಕ್ಕೆ । ಸಿದ್ಧಿ ಅಹುದು ॥ ೪ ॥ ನಾನಾಬಗೆಯಿಂದಯದಿಂದ । ನಾರಿಗುತ್ತರವನೆ ಬರೆದೂ। ದಾನಾವಾಂತಕ ಅರ । ಗಿಳಿಯ ತುಂಡಕೆ ಕೊಟ್ಟು । ಏಣಾಕ್ಷಿಗೆ ಮುಟ್ಟಿ ಸೆಂದಾ ॥ ೫ ॥ ಶ್ರೀ ॥

ರಾಗ ಭೈರವಿ, ರೂಪಕತಾಳ.

ಬಿಂತಾಗಿಳಿಯು ಸತ್ಯಭಾಮೆ ಏಕಾಂತದೊಳಗಿರೆ । ಕಂತುಪಿತನ ಉತ್ತ ರವನೀಕ್ಷಿಸುತ ಕುಳಿತಿರೆ ॥ ೧ ॥ ಕಾಂತ ಬರದುತ್ತರವ ನೋಡಿ ಕಳ ವಳಿಸುತಲಿ ನಿಖಿಳ । ಕಾಂತೆಯುರನು ಕರೆದು ಬುದ್ಧಿಬೆಸಸಿಯೆನುತಲಿ ॥ ॥ ೨ ॥ ಕೆಲವರೊಂದು ಮಾತನಾಡಲದನು ಕೇಳುತಾ । ಹಲವರೊಂದು ಮಾತನಾಡಲದನು ತಾಳುತಾ ॥ ೩ ॥ ನಳಿನಮುಖಿಯರೆಲ್ಲ ಕೂಡಿ ನಯದ ಸುದ್ದಿಯಾ । ಚಲುವಕೃಷ್ಣನ ಕರೆಸಬೇಕೆಂದು ಕೊಟ್ಟರು ಬುದ್ಧಿಯಾ ॥ ೪ ॥ ದೂತಿಯೊಬ್ಬಳ ಕಳುಹಬೇಕು ಮಾತುಗಾರಳ । ಆತುರವೆಂದು ತಿಳಿಸಬೇಕು ಅಂಗಜನುಪಟಲಾ ॥ ೫ ॥ ಮಾತುಮಾತಿಗೆ ಹರಿಯ ನೆನೆದು ಮನದಿ ಧ್ಯಾನಿಸಿ । ದಾತಕೃಷ್ಣನ ಕರೆಸಿ ಸ್ಮರಿಸಿ ಧೈರ್ಯ ಮಾನಿಸಿ ॥ ೬ ॥ ಶ್ರೀ ॥

ದ್ವಿಪದೆ.

ಕ್ಷೀರಸಾಗರ ಕನ್ಯೆ ವಾರಿಜಾಲಯುಲಕ್ಷ್ಮಿ ಅ । ಪಾರ ಕರುಣಾಂಭೋಧಿ ಅಜನತಾತ । ವಾರಿಧೀಶಯನ ಊರ್ವಿಯ ಭಾರವಿಳುಹದಳೆ । ಧಾರುಣಿ ಯೊಳೆದು ಕುಲವಂಶವನುಸರಿಸಿ । ಕೋರಿದ್ದ ಕೋರಿಕೆಗೆ ವಸುಬೇವ

ದೇವಕೀ । ಸೇರಿದ್ದ ಸೆರೆಮನೆಯೊಳವರ ಬಸುರಿನಲಿ । ಅವತಾರಮಾಡಲ್ಕೆ
ಒಂದಾಂಶದಲಿ ಭೀಷ್ಮಕ । ಧಾರುಣೀಶನಲಿ ರುಕ್ಮಿಣಿಯಾಗಿ ಅವತರಿಸಿ ॥
ಸತ್ರಾಜಿತಸಾರ್ವಭೌಮನಲಿ। ಸತ್ಯಭಾಮೆಯಾಗಿ ಅವತರಿಸಿ। ವಾರಿಜಾಂ
ಬಕಿ ಸ್ಯಮಂತಕರತ್ನವ್ಯಾಜ್ಯದಿಂ । ಸೇರಿ ಕೃಷ್ಣನ್ನ ಸವತಿಯೊಳು ಕಲಾಪ।
ನಾರದನು ತಂದಿತ್ತ ಸುರಲೋಕ। ಪಾರಿಜಾತದ ಕುಸುಮ ಸೇರಿ ರುಕ್ಮಿಣಿಯ।
ಸೌಭಾಗ್ಯದರಮನೆಯಲ್ಲಿ ತೋರಿಸಲು । ಪ್ರೇಮಕಲಹದಲೀಲೆನರನಂತೆ ।
ಮಾರನೆರದಂಡಲಿಯೆ ಮತ್ತಸಾಮಜಗಮನೆ । ತೋರ್ವ ಕಳೆಗಳು ಚಲ್ವ
ಕುಂದಕುಡ್ಮಲ ರದನೆ । ಮಾರನಯ್ಯನ ಕೂಟ ಮನದೊಳಾಕ್ಷೇಪಿಸುತ ।
ನಾರಿಶೃಂಗರಿಸಿಕೊಂಡಳು ನಲುವಿನಲಿಯಿತ್ತಾ ॥ ೧ ॥ ಪನ್ನೀರು ತರಿಸಿ
ಮೊಗವನೆತೊಳೆದಮೇಲೆ । ಕಮ್ಮೆಣ್ಣೆ ಅನುಲೇಪನವಮಾಡಿ ಹವಳದ ।
ಪಿಡಿಯ ಹಣಿಗೆಯುಳ್ಳಿಕ್ಕಿ ಬೈತಲೆತೆಗದು ಹೆರಳಿಂಗೆ । ರನ್ನಕೆತ್ತಿಸಿದ
ರಾಗಟೆಚೌರಿಗೊಂಡೆ। ಮುತ್ತಿನಕುಚ್ಚುಗಳು ಮೋಹಿಪ ಮೊದದ ಹೊಸ।
ಚಿನ್ನದರಗಿಳಿಗಳುಹಾಕಿಹವಣ್ಣದಲಿವ। ಮಾರು ಜಡೆಹೆಣದು ವದ್ದೆಪಾವಡ
ದಿಂದ। ಬೆನ್ನೊಡಕು ಹೆಗಲು ಕೊರಳಿನ ಬೆವರಗಳನೊರಸಿ। ಉನ್ನತದನಿಲವು
ಗನ್ನಡಿ ನಿಲಿಸಿಹೊಸದಾ ಚಿನ್ನಸುಲಿಪಲ್ಲಿಂಗೆವರಸಿ ಜಲಮುಕ್ಕಳಿಸಿ। ಚಿನ್ನ
ದಳತುಂಬಿ ರಾಜಿಸುವತಾಪತೆಹಸರು। ಬಣ್ಣದಾ ಕುಪ್ಪುಸವ ಬಿಗಿಬಿಗಿದು
ತೊಟ್ಟು। ನುಣ್ಣನಹೊಂಬಣ್ಣದೊಳವಸ್ತ್ರವನೆಕಟ್ಟಿ। ಸಣ್ಣಚಂದಿರಗಾವೆ
ಸೀರೆಜರತಾರಂಚು। ಕಣ್ಣಿಗಿಂಪಾಗಿರ್ದ ಕನಕಲತೆಮಯಶರಗು। ರನ್ನ
ಶಿರೋಮಣಿಯುಟ್ಟು ನಯದಿಂದ ಕುಳಿತು। ಕನ್ನೆಯರು ತಂದಿತ್ತ ಆಭರ
ಣದೊಳು ತನ್ನ। ಕಣ್ಣುಪ್ರೀತ್ಯೋಸ್ತುಗಳನಿಡುವ ಚಂದಾ ॥ ೨ ॥ ಜಾತಿ
ಮುತ್ತಿನಯಾಳಿಯು ಜಾಣೆಬೈತಲೆತಳಪಿ। ಗಾತುಹಾಕಿದಳು। ಇಮ್ಮಡಿಕೆ
ಯಲಿ ಸಂಪಿನಲಿ। ದೂತಿಯರು ಚಂದ್ರಸೂರ್ಯರ ಮುಂದಲೆಗೆಸಾರ್ಚೆ।
ನೂತನೊಜ್ರದಬಟ್ಟು ನೊಸಲಿಲೊಲುವಂತೆ। ನಾಗೋತ್ರನಲಿವೃತ್ತ ಪಂಜಿ
ನೋಲೆಸರಪಳಿಯು। ಫುಲ್ಲಲೋಚನೆ ಚಳತುಂಬು ವಿಮಾನಬಾವುಲಿಯು।
ಹೊನ್ನೂವು ಗಾತ್ರಮುತ್ತಿನ ಬುಗಡಿ ಗರುವೆ। ಕರ್ಣದಲಿಟ್ಟು ಸುಗಾತ್ರಿ
ಮೂಗುತಿಮುತ್ತು। ಬೆಲೆಯಿಲ್ಲದಂತಿರಲು ಮುದ್ದುಸುರಿವುತಲಿ ॥ ೩ ॥

ಸರವುತ್ತುಚಿಂತಾಕಸರಿಗೆ ತಾಯಿತವುತ್ತು । ಮೆರೆವಯೇಕಾವಳಿಯು ಮೋಹನ್ನಸರಬಣ್ಣ। ಸರಪುತ್ಥಳಿಯುಸರವ ಉರದಲೊಪ್ಪುವ ಪದಕ। ಥರ ಥರಕೆ ತಾರಕಿಯಂತೆದೀಪಿಸುತ। ಪರಿಪರಿಸುವಸ್ತುಗಳ ತನ್ನಕೊರಳಿನೊಳ ಗಿಟ್ಟು। ಕರದಿಕಂಕಣದೋರೆ ಹರಡಿಕೈಕಟ್ಟುಸ್ತ। ಕಡಗಬೆರಳಿನಲಿ ವಜ್ರದುಂ ಗುರ ತೋಳ್ಬಂದಿ। ಥರಿಸಿ ವಂಕಿಯನಿಟ್ಟು ಬಾಪುರಿಯು ತೊಟ್ಟು। ಪರುಠ ವಿಸಿಕಾಂಚಿ ದಾಮವನು ಮಧ್ಯಕೆ ಕಟ್ಟಿ । ಮುರಡಿಸರಪಳಿ ಹಲ್ಪಿರುಳಿ ಕಾಲ್ಕಡಗಪಾದ। ಸರಸಿಟ್ಟಿ ಕಾಲುಂಗ್ರ ಕಿರಿಪಿಲ್ಲೆಮೆಂಟಿಕೆಯು। ಭರದಿ ಅಣಿ ಮೆಟ್ಟು ಅರಗಿಳಿಯುಕಾಲ್ಪರಿ ಕೇ। ಸರಿಗಂಧ ಕೊರಳಿನಲಿ ಅರ್ಥಿಯಲಿ । ಧರಿಸಿ ಮೃಗನಾಭಿದ್ರವಯಹುಬ್ಬು ಮಧ್ಯದಲಿ। ಸುರಿಸುವ ಅಮೃತಸೋನೆ ಸೊಗಸು ಅಧರಕ್ಕೆ । ಕಸ್ತೂರಿಬಟ್ಟುಗಳು ಗಂಡಸ್ಥಳಗಳಿಗೆ । ಕಡ್ಡಿಯಲಿ ಬರದಿಟ್ಟು ಚಂದಿರವಸುರಿದು । ಬೈತಲೆಗೆ ಹರಿಣನೋಟದ ನಯನಕ್ಹಚ್ಚಿ ದಳು ಕಾಡಿಗೆಯಾ। ಸರಿಮುದ್ದುಕಲಶಕುಚಗಳಲಿ ಕುಂಕುಮಕೇ। ಸರಚಿನ್ನ ಗಳವಾಡಿ । ಅರಗಜ ಅತ್ತರುಬಾಹುಮೂಲಕೆ । ಅಗ್ಗಿನ್ಹೊಗೆ ಸರ್ವಾಂಗ ದೊಸ್ತ್ರಕೆಕೊಟ್ಟು। ಸುರಹೊನ್ನೆ ಜಾಜಿಮಲ್ಲಿಗೆ ಹಾರತುರುಬಿಂಗೆ। ದುರುಬ ಕೇತಕಿಗಳನು ಪರಮವಯ್ಯಾರದಿಂ । ಹಸರುಜರತಾರ ಚಾದರಜಾಣೆ ಮುಸುಕಿಟ್ಟು। ಕಿರಿನಗೆಯಮೊಗದ ಮಾನಿನಿಯು ಕರ್ಪೂರದಡಿಕೆ । ಖದಿರ ಯುಕ್ತತಾಂಬೂಲ ಚದುರೆಗಲ್ಲದ। ಸರಸಿಜಾಕ್ಷಿಯ ಮೈಸುಗಂಧಕೆ । ಹರಿ ದುಹೋಗದೆಮುರಿದುಂಬೆ ಅಡ್ಡಾಯುತಿರೆ । ಅರಸಂಚೆಗಮನೆ ಹೊನ್ನಾವಿ ಗೆಯ ಮೆಟ್ಟಿ । ವುರಭಾರಕೆ ಬಾಗಿಬಳಕುತ ಹರಿಣಾಕ್ಷಿ। ಯುರವಳಗೆ ಅಕ್ಕರ ವುಳ್ಳ ಬಾಲಕಿಯ। ಕರದಲ್ಲಿ ಕರವಿಟ್ಟು ಹೊರಗಿನಂಗಳಕ್ಹೆಜ್ಜೆ। ಸರಿಸಿಟ್ಟು ಬರುತಿಹ ಚಂದಾನಂದಾ ॥ ೪ ॥ ಚಲುವಪಾದಕೆ ಕೂರ್ಮ ಮುಳಿದು ಧುಮುಕಿತು ಮಡುವು। ಕೊಳನಸೇರಿತು ಅಂಚೆಕಾಲ್ಗತಿಯನೋಡಿ। ಹೊಳೆ ವಜಂಘೆಗೆ ಮನ್ಮಥನ ಬೆನ್ನುಸೇರುತಿಹುದೆ। ತಲೆಯು ಬಾಗಿತು ಬಾಳೆತೊ ಡೆಯ ಚಲ್ವಿಕೆ ಕಂಡು । ಭಳಿರೆ ಭಳಿರೆ ನುಡಿಯುದಲೆ ಕಲ್ಲಾಯಿತ್ತು ಗಿರಿಯು। ಈ। ನಳಿನನೇತ್ರೆಯ ನಿತಂಬವ ಕಂಡು। ಗವಿಯುಹೊಕ್ಕಿತು ಸಿಂಹ ಬಲು ಸಣ್ಣನಡುವಿಂಗೆ । ನೊಲೆಕಟ್ಟೆಗಾಗಿ ಮುಣ್ಗಾ ಕುವದು ಗಜಶಿರಕೆ । ವಲಿವ

ಬಾಹುದ್ವಯಕೆ ಇಲಿಯ ನುಂಗಿತು ಸರ್ಪ । ಅಳಿದು ಮಕ್ಕಳನೆಲ್ಲ ನೋಡಿಕೆಂಬ್ಬಲ್ಲ । ಹೊಳವಿಕೆಗೆ ದಾಳಿಂಬ । ಬಳಲಿಬಿಟ್ಟಿತು ಬಾಯ ಹುಳಿಯನೈದಿತು ನಿಂಬೆ ರಂಭೆಮೈಬಣ್ಣಕೆ । ಬೆಳಗುತಿಹ ಕಂಗಳಿಗೆ ಬೆದರಿ ಓಡಿತು ಯೆರಳೆ । ಸುಳಿಗುರುಳಿಗಾತುಂಬಿ ಸಂಪಿಗಾಸಪ್ಪದಿಸಿತು। ಝುಳಝುಳಿಪ ಮುಖಕೆ ಶಶಿನಡುವೆ ಕಪ್ಪಾಯಿತೂ । ವಾಣಿಸರಸ್ವತಿಯು ಪಂಚಬಾಣನರಸಿಯು । ಮಾಣದಲೆ ಶಚಿದೇವಿ ಕಾಳಾಹಿವೇಣಿಯರು। ಕವಿದು ಊಳಿಗವ ಮಾಡುವರು। ಕಾಣಪಾಟಿಯಲಿ ಬ್ರಹ್ಮಾಣಿ ರುದ್ರಾಣಿ। ಈಕೆ ಕಡೆಗಣ್ಣನೋಟದಲಿ । ಕೇಣವಿಲ್ಲದೆ ಪದವನೈದುವರು ಆಸುಕ್ರ । ವೇಣಿ ಬಂದಳು ಹೊರಗಿನಂಗಳದೊಳುಪವನಕೆ ॥ ೫ ॥ ಶ್ರೀಃ ॥

ರಾಗ ಭೈರವಿ, ರೂಪಕತಾಳ.

ಓತೆಮ್ಮುವಕಾರಂಜಿ ಘಮ್ಮಾನೆ ಪುಷ್ಪದ । ರಮ್ಯವಾದ ವನದೊಳಗೆ ॥ ಸುಮ್ಮಾನದಲಿ ರತ್ನಗಂಬಳ್ಹಾಸಿಗೆ ಹಾಸಿ । ನಂಬಿಕುಳಿತಳು ತಕ್ಕೆ ಯಕ್ಕೆ ॥ ೧ ॥ ಎಡಬಲದಲಿ ಸಾಲುಜಡದಿರ್ದ ನಾರಿಯಾ । ಗಡಣದೊಳ ಗೇಗಾನಿಯರೂ ॥ ಪೊಡವೀಶ ಕೃಷ್ಣನ್ನ ಪಾಡುತಿರಲು ಮನ । ಕಡ ರಿತು ಕಾಮುಕಲೆಗಳೂ ॥ ೨ ॥ ಚಿಂತಿಸಿದಳು ಚಿನ್ಮಯರೂಪನ ತನ್ನಾ । ಅಂತಃಕರಣದೊಳಿಟ್ಟಬಲೇ ॥ ಕಂತುಪಿತನ ಕೀರ್ತನೆಗೈದಳು ತನ್ನಾ । ಅಂತಃಕರಣ ಕದಡಿಸುತ ॥ ೩ ॥ ಶ್ರೀಃ ॥

ಸೀಸಪದ್ಯ.

ಶ್ರೀರಮಣ ಸರ್ವೇಶ ವಾರಿಜಾದಳನಯನ। ಮಾರನಾಪಿತ ಮಂದಹಾಸವದನ ॥ ಸಾರಿದೆನೊ ನಾನಿನ್ನ ಸಾಕ್ಷಾತ್ ಹರಿ ಚಕ್ರ। ಧಾರಿ ಮಧುವಾರಣೋದ್ಧಾರನೆಂದು॥ ದೂರದಲಿ ದ್ರೌಪದಿಯು ನಿನ್ನಡಿಯ ಸ್ಮರಿಸಲು। ಬೇಗಬಂದವಳ ಅಭಿಮಾನ ಕಾಯ್ದೆ ॥ ವಿಾರಿದ್ದ ಕಾಳಿಗಚ್ಚು ಪರಿಹರಿಸಿ ಗೋವಳರ । ಭಾರಿಭ್ಹಾರಿಗೆ ಬಂದ ಭಯವ ಕಳೆದೆ ॥ ೧ ॥ ಬಕನ ನೀ ಸಂಹರಿಸಿ ಶಕಟನ್ನ ಮುರಿದೊತ್ತಿ । ಮಕರಖರಮಂದಮುತಿಖಳರ ಕೊಂದೆ ॥ ವಿಕಟಪೂತನಿಯ ಅಸುವನೆ ಹೀರಿ ಗೋಕುಲದ । ವಿಕರಕ್ಷಿ

ಸಕಲ ಸಂತೋಷವಿತ್ತೆ ॥ ಮಕುಟವರ್ಧನ ಮಾವಕಂಸನ ಮಡುಹಿ ದೇ । ವಕಿದೇವಿ ವಸುದೇವರುಗಳ ಸೆರೆಯ । ಮುಕುತರನು ಮಾಡಿ ಮುತ್ಯಗೆ ಪಟ್ಟಗಟ್ಟಿಸಿದೆ । ಭಳಿಭಳಿರೆ ನಿನ್ನಾಟ ಗೋಪಿಯರ ಕೂಟಾ ॥ ॥ ೨ ॥ ಗೊಲ್ಲರೊಳಗೋಡ್ಯಾಡಿ ಗೋವುಗಳ ಕಾಯಿದು । ಬಲುಕಳ್ಳರಕ್ಕಸರ ಕಪಟದಲಿ ಕೊಂದೆ॥ ವಲ್ಲಭೆಯರೆಲ್ಲ. ಜಲಕ್ರೀಡೆಯಾಡಲು ವಸನ। ಕಳ್ಳತನದಲಿ ಕೊಂಡು ಕಡವನೇರ್ದೆ ॥ ಉಲ್ಲಾಸದಿಂದ ಸರ್ವರನಗ್ನತನ ನೋಡಿ । ಬಲುಹೀಲ್ಯವರ ಕೂಡ ಆಟವನೆ ಆಡಿ । ಸಲ್ಲೋದು ನಿನಗೆ ಶ್ರೀರಮಣ ಲಕ್ಷ್ಮೀಕಾಂತ। ಗೊಲ್ಲರೊಳಗೋಡ್ಯಾಟ ಮಾಡಿದ್ದೆ ಮಾಟಾ ॥ ॥ ೩ ॥ ದುರುಳದೈತ್ಯರ ಕೊಂದು ನಾರಿಯರಿಗೊಲಿದು ನೀ । ಸರಕು ಮಾಡದೆ ಜಾಂಬವಂತನೊಡನೆ ॥ ತರಕಿಯುದ್ಧವಮಾಡಿ ತಪ್ಪದೆ ಮುರಹರಾ । ಕೌಸ್ತುಭಸ್ಯಮಂತಮಣಿ ಮುದ್ದುಕನ್ನಿಕೆಯ ॥ ಕರಗ್ರಹಣವನೆ ಮಾಡಿ ದ್ವಾರಾವತಿಗಾಗಿ । ಹರುಷದಲಿ ನೀಬಂದು ಹದನವನೆ ತಿಳುಹಿ ॥ ಗಿರಿಧರಾ ಕ್ಷೀರಾಬ್ಧಿಶಯನ ನಿನ್ನಾ ಮಹಿಮೆ। ಅರಿಯಲರಿಯರಯ್ಯ ಅಜ ಸುರಾಧಿಪರೂ ॥ ೪ ॥ ಕೊಳಲೂದಿ ಗೋಪಿಯರ ಕಾಮಪಾಶದಿ ಕಟ್ಟಿ । ಬಳಲಿಸಿದೆ ಪ್ರೇಮಬಗೆಬಗೆಗಳಿಂದ ॥ ಕೆಲಬರನು ಮುದ್ದಾಡಿ ಕೆಲಬರನು ಕೂಡಿ ಭ್ರಮೆ । ಗೊಳಿಸಿದ್ದೈ ಬಲುಕಾಮಕಲೆಗಳಿಂದ ॥ ನಳಿನಾಕ್ಷ ಋಷಿಪತ್ನಿಯರು ತಂದ ವ್ಯಪ್ಟಾನ್ನ । ಗೆಳೆಯರನು ಕೂಡಿ ಭೋಜನವ ಮಾಡಿ । ಕೆಳದಿಯರ ಕಾಮತೃಪ್ತರಮಾಡಿ ಕಳುಹಿಸಿದೆ। ಭಳಿಭಳಿರೆ ನಿನ್ನಾಟ ದಿವ್ಯಮಾಟಾ ॥ ೫ ॥ ಗಿರಿಯೆತ್ತಿ ಗೋಕುಲವ ಪೊರೆದೆಯ್ಯ ಸುರಿಮಳೆಯ । ಗರದ ಇಂದ್ರನ ಗರ್ವಮುರಿದೆ ನೀನೂ ॥ ಪೊರೆದೆ ಪಾಂಡವರ ಅರಗಿನಮನೆಯಲಾರಣ್ಯ । ದಿರಲು ಅಜ್ಞಾತವಾಸದಲಿ ಬೇಗ ॥ ಅರಸುಗಳ ಮಾಡಿ ಕುರುಪತಿಯೊಡನೆ ಯುದ್ಧವನು । ಧರಿಸಿದ್ದೈ ಅದಕೆ ಅಧ್ವರ್ಯುರ್ ನೀನೂ॥ ಆರಮುರೆಯಿಲ್ಲದೆ ಅರ್ಜುನನರಥಿಕತನ। ವೆರಸಿ ಕಾಯಿದೆಯವನ ದೇವಾದಿದೇವಾ ॥ ೬ ॥ ಶರಣಾಗತ ಪ್ರಾಣನೆಂದು ರಿಪುಗಳನೆಲ್ಲ । ಹರಣಮಾಡಿಸಿದೆ ನೀ ಶರಣನಿಂದ ॥ ಪರಿಣಾಮವನು ಕೊಟ್ಟಿ ಪಾಂಡವರಿಗಿಭಪುರಿಯ । ಧೊರೆತನವ ಕೊಟ್ಟು ಪಟ್ಟವನೆ ಗಟ್ಟಿ ॥ ವರ

ಅಂಬರಿಷಗಾಗಿ ಹರ್ರೈದು ಅವತಾರ । ಧರಿಸಿದ್ಯೆ ಭಕ್ತವತ್ಸಲ ಮುರಾರಿ ॥ ಕರುಣಾಕರನೆ ನಿನ್ನ ಮರೆಹೊಕ್ಕವರನೆಲ್ಲ । ಪೊರೆದೆಯ್ಯ ದುರಿತಕೋಟಿಗಳ ತರಿದೂ ॥ ೭ ॥ ಅಂದು ಹಯಾಸ್ಯನ ಕೊಂದು ವೇದವನೆ ತಂದೆ ಆ । ನಂದದಿಂದಲಿ ಶತಾನಂದಗಿತ್ತೆ ॥ ಮಂದರಗಿರಿಯು ಬೆನ್ನಿಲಿ ಪೊತ್ತು ಧರಣಿಯನು । ತಂದೆ ನೀ ವರಹರೂಪವನೆ ತಾಳಿ ॥ ಕಂದನ ಸಲಹಿದೆ ಕನಕಕಶ್ಯಪನ ಸೀಳಿ । ಇಂದ್ರಗಾಗಿ ಬಲಿಯೂಗವನ್ನೆ ಸಂಹರಿಸಿ ॥ ತಂದೆ ಮಾತನು ಕೇಳಿ ತಾಯಿಶಿರವನೆ ತರಿದೆ । ಬಂದು ಕೌಶಿಕನ ಭಯ ಪರಿಹರಿಸಿದೆ ॥ ೮ ॥ ಕಲ್ಲ ಕಾಲಿಲಿ ತುಳಿದು ಕೋಮಲಾಂಗಿಯ ಮಾಡಿ । ಬಿಲ್ಮುರಿದು ಸೀತೆಯನು ಬಿಂಕದಲಿ ಗೆದ್ದು ॥ ಪಥದಲ್ಲಿ ಬರುತಿರೆ ಪರಶುರಾಮನೆದುರಿಲಿ ಕಾದಿ । ಇಲ್ಲ ಸಂಶಯವು ಪುರುಷೋತ್ತಮನೆಂದು ತಿಳಿಸಿ ॥ ಸಲ್ಲಿಸಿದೆ ಪಿತನಾಜ್ಞೆ ಸಹೋದರಗೆ ರಾಜ್ಯವ ಕೊಟ್ಟು । ವಲ್ಲಭೆ ಸೀತೆಯ ಸಹಿತ ವನವನೆ ಚರಿಸಿ ॥ ಅಲ್ಲಿಂದ ರಾವಣನು ಅಪಹರಿಸೆ ಸೀತೆಯನು । ಕಲ್ಲಿನಲಿ ಸೇತುವೆಯ ಕಟ್ಟೆ ಕಪಿಗಳನೆ ನೆರಹಿ ॥ ೯ ॥ ಹತ್ತುತಲೆ ರಾವಣನ ಹತಮಾಡಿ ಲಂಕೆಯನು । ಪಟ್ಟಗಟ್ಟಿದೆ ವಿಭೀಷಣನ ನಿಲಿಸಿ । ಮತ್ತೆ ಸೀತೆಯ ಸಹಿತ ಅಯೋಧ್ಯವನಾಳ್ದೆ ಬಲು । ಶತ್ರುಗಳ ಸಂಹರಿಸಿ ಸ್ಥಿರರಾಜ್ಯವನು ಮಾಡಿ ॥ ಭಕ್ತವಶನೆಂಬ ಬಿರಿದಿಂಗೆ ದೇವಕಿಯಲ್ಲಿ । ಯದುಪೊತ್ತಮನೆನಿಸಿ ನೀನು ಅವತರಿಸಿ ॥ ಸತ್ಯಭಾಮೆ ರುಕ್ಮಿಣಿಯೊಳು ನೀ ಪ್ರಪಂಚದಿ । ಮತ್ಸರವಬೆಳಸಿ ಮದನಕಲಾಪವಮಾಡ್ದೆ ॥ ೧೦ ॥ ಬುದ್ಧಾವತಾರದಲಿ ನಾರಿಯರ ವ್ರತಗೆಡಿಸಿ । ಕಾದಿ ಅಶ್ವವನೇರಿ ಕಡಿವೆ ರಕ್ಕಸರಾ ॥ ಆದಿಮೂರುತಿಯೆನಿಸಿ ಅನೇಕ ಲೀಲೆಯಲಿ । ಭೇದಿಸಿ ಅಸುರರ ಭೂಭಾರಯಿಳುಹಿದೆ ॥ ವೇದಗಳು ಸ್ತುತಿಸಿ ಕಡೆಗಾಣದಾದವಯ್ಯ । ನಿನ್ನ ಲಕ್ಷ್ಮಿಗೆ ತಿಳಿಯದಂತಾಯಿತು ॥ ಅಪರಿಮಿತವಾದವಯ್ಯ ನಿನ್ನ ಮಹಿಮೆ ಅನಂತಲೀಲೆ । ಅವರಿಸಿ ಎನ್ನ ನೀ ಪೊರೆಯೊ ಗೋಪಾಲಾ ॥ ೧೧ ॥ ಹೆತ್ತತಾಯಿ ಧ್ರುವನ ಬಿಡಿಸಲಾರಣ್ಯದೊಳು । ತೆತ್ತಿಗನಾಗಿ ನೀ ಕಾಯಿದೆ ಹರಿಯೆ । ಮಿಥ್ಯವಾದಿ ಹಿರಣ್ಯಕಶ್ಯಪ ಮಗನ ಬಾಧಿಸಲು । ಕರ್ತ ನೀನಾಗ್ನವನ ಪೊರೆಯಲಿಲ್ಲೆ ॥ ಭತ್ರ್ಯಗಳು ಸಭೆಯೊಳಗೆ ಬಾಯಿಮುಚ್ಚಿ

ರಲು ಜಗ। ದ್ಭರ್ತೃ ನೀ ದ್ರೌಪದಿಯ ಮಾನಕಾಯಿದೆ ॥ ಹೆತ್ತ ತಂದೆ ಯು ಮಗನ ಹಿಡಿತಂದು ತೈಲದೊಳು । ಎತ್ತಿ ಬಿಸುಡಲು ನೀನು ಕಾಯಿದೆ ಹರಿಯೆ ॥ ೧೨ ॥ ತ್ರಿಗುಣ ನಿನ್ನಾಧೀನ ತ್ರಿದಶರು ಪರಿವಾರ ತ್ರಿಭುವನಕೆ ನೀನೊಡೆಯ ತ್ರಿಪುರಸಂಹಾರ ॥ ತ್ರಿನೇತ್ರ ಸಖ ನಿನಗೆ ತ್ರಿಕರಣಾರ್ಜಿತವಾಗಿ। ತ್ರಿವಿಕ್ರಮನಾಗಿ ಸುರನದಿಯ ತಂದೆ ॥ ತ್ರಿವಿಷ್ಟಪ ಪತಿ ನಿನಗೆ ತೃಣಸಮಾನವು ಬ್ರಹ್ಮ। ತ್ರಿಪುಟಿಗಳ ಗೆದ್ದು ತಾ ತೀವ್ರದಿಂದ ॥ ತ್ರಿಮೂರ್ತಿಗಳೊಳಗೆ ಪರತರನೆನಿಸುತಿಹ। ದತ್ತಾತ್ರೇಯನಾದ ಗೋಪಾಲಪೊರೆವುದೆನ್ನ ॥ ೧೩ ॥ ಶ್ರೀಃ ॥

ರಾಗ ಕಲ್ಯಾಣಿ, ಆದಿತಾಳ.

ಭಾಮೆ ಹಿಡಿದಿದ್ದಾಳು ಬಟ್ಟಲಲ್ಲಿ ಮೀಳಯವ ॥ ಅವಳೊಬ್ಬಾಳಾದಾರಾಗಲಿ । ಕಾಮನಯ್ಯಾನಾ ಕರತರಲಿ ॥ ಪಲ್ಲ ॥ ನೂತಾನೋಕ್ತಿಗಳಿಂದಾ ಸವಿಮಾತಿನ ಚರ್ಚೆಯಾಗಾಲೀ। ಪ್ರೀತಿಬಡಿಸುವಂಥಾ ಕಲಕಂಠೀರೀತಿಯಾಗಲಿ । ಸೋತುಬಾಹೋದಕ್ಕೆ ಕಾವ್ಯಾ ॥ ವ್ರಾತಕವಿತ್ವಾವಾಗಲಿ ನಾಥನಾ ಕರತಂದವಳಿಗೆ। ನಾನೊಲಿದುಕೊಡುವೆನೆಂದು ॥ ೧ ॥ ಯಂತ್ರಾಮಾಯಾದಿಂದಾಗಲಿ । ತಂತ್ರಾಜಪದಿಂದಾಗಲಿ ಸಿಂತ್ರಾವಾಗಲಿ ಸಾಬಲ ಮಂತ್ರವಾಗಲಿ ॥ ಅಂತ್ರಾವಿಲ್ಲಾದಂತಾ ಆದೀಶಕ್ತೀಮಾಹಾತ್ಮೆಯಾಗಲಿ। ಕಂತುಪಿತನಾ ಕರತಂದವಳಿಗೆ ಕರುಣಿಸಿಕೊಡುವೆನೆಂದು ॥ ॥ ೨ ॥ ಯುಕ್ತಿಯಿಂದಾಗಲಿ ಮಧುರೋಕ್ತಿಯಿಂದಾರಾಗಲಿ। ಭಕ್ತಿಯಿಂದಾಗಾಲಿ ಅಪರಿಮಿತಾರ್ಥದಿಂದಾಗಲಿ ॥ ಮುಕ್ತಿಗೊಡೆಯಾ ಗೋಪಾಲನ್ನ ಮೋದದಿಂದಾ ಕರತಂದವಳಿಗೆ। ಮುತ್ತಿನಾ ಹಾರಾವ ಈಕ್ಷಣ ಕೊಟ್ಟೂ ಕಳುಹುವೆನೆಂದು ॥ ೩ ॥ ಶ್ರೀಃ ॥

ವಚನ, ರಾಗ ಪೂರ್ವಿ.

ಕೌಂತೆಯರುಭಯಪಾರ್ಶ್ವ । ನಿಂತಿರ್ದರೊಳು ಕಾರ್ಯ । ಪ್ರಾಂತ ಗಾಣಿಸವ ಕೌಶಲೆಯ ಕರದು ॥ ಏಕಾಂತದಲಿ ಬುದ್ಧಿ । ಯುಕುತಿಯ ಕೊಟ್ಟು । ಶ್ರೀಲಕ್ಷ್ಮೀಕಾಂತನತಿವೇಗದಲಿ ಕರತಾ ಹೋಗೆಂದು ಮನ।

ಸ್ವಂತವಸ್ತ್ರಾಭರಣಗಳನೆಲ್ಲವನು ಕೊಟ್ಟು ಸಂತೋಷವನು ನೋಡು ಸರಸ ಮಾತುಗಳಾಡು । ಭ್ರಾಂತಳಾಗದೆ ಬಾಯಿಬಡಿಕತನ ಮಾಡದಲೆ । ಇಂತಾಡದೆ ನ್ಯೂನಪೂರ್ಣಗಳನೆಣಿಸದಲೆ ಬುದ್ಧಿ । ವಂತಳಾಗಿ ಕಾರ್ಯದಲಿ ಅಪೇಕ್ಷೆಯಿಟ್ಟು । ಪಂಥಗೆಲಿಸೆಂದು ಇಂತುಸತ್ರಾಜಿತಕುವರಿ ತನ್ನ ದೂತಿಗೆ। ಮಂತ್ರಮಾಯೆಯ ಕೊಟ್ಟು । ಬೆನ್ನಿನಲಿ ಕೈಯಿಟ್ಟು ಪ್ರಾಣ। ಕಾಂತನಿದ್ದೆಡೆಗೆ ರಾಯಭಾರಕೆ ಕಳುಹಿದಳು ॥ ೧ ॥ ಶ್ರೀಃ ॥

ರಾಗ ಪೂರ್ವಿ, ಆದಿತಾಳ.

ಅಂದವಾದಾ ಹಸರು ಮೇಲ್ಪಂದಿಯನುಟ್ಟಳು ದೂತಿ । ಕೆಂದಾವರೆ ಮಗ್ಗಿಯ ಕುಪ್ಪಸವ ತೊಟ್ಟಳೂ ॥ ಚಂದ್ರಕಿರಣವು ಪೋಲ್ವ ಚಲ್ವ ಜರತಾರಂಚಿನ । ತೌಬಂದನುಟ್ಟು ಚೆಲ್ವಿಕೆಯಾ ನೋಡುತಿದ್ದಳೂ ॥ ॥ ೧ ॥ ಹಸ್ತಕಡಗವನಿಟ್ಟು ಹವಳಾದಾ ಕೈಕಟ್ಟಾ ಕಟ್ಟಿ । ಗುತ್ತಾನಾದಾ ಸರಿಗೆ ಪಂಜಿನೋಲೆನಿಟ್ಟಳು ॥ ವಿಸ್ತಾರಾದಾ ಚಳತುಂಬು ಚೌರಿ ಗೊಂಡೆ ಹಾಕಿ ನವ। ರತ್ನ ಕೆತ್ತಿಸಿದ ರಾಗಟೆಯಾನಿಟ್ಟಳೂ ॥ ೨ ॥ ಕಸ್ತೂರಿತಿಲಕವನಿಟ್ಟು ಕಣ್ಣಿಗೆ ಕಾಡಿಗೆ ಹಚ್ಚಿ । ಮುತ್ತಿನಲ್ಲಾಡಿಸುವ ಮೂಗುತಿಯ್ನಾನಿಟ್ಟಳೂ ॥ ಪುತ್ಥಳಿಯಸರ ವಡತಿಯಿತ್ತ ಮೋಹನ್ನ ಮಾಲೆಯು । ಅರ್ಥಿಕೊರಳಿಗ್ಹಾಕ್ಯಾಯತ್ತಾವಾದಾಳು ॥ ೩ ॥ ಶ್ರೀಃ ॥

ದ್ವಿಪದೆ.

ಶೂಲ ಮುಸುಕಿಕ್ಕಿ ಬಿಳಿಯೆಲೆ ಮೆಲುವುತ ಚಂಡಿ । ಕಾಳಿದುರ್ಗಿ ಭವಾನಿಯರ ವಶಕರಿಸಿ । ಸಾಲುತಾಯಿತತರಿಸಿ ತುರುಬಿಂಗೆ ಸರಿಸಿ । ಫಾಲಾಕ್ಷ ನಾ ಹೋದ ಕಾರ್ಯಸಿದ್ಧಿಸೆ ನಿ । ನ್ನಾಲಯದೊಳುಗುಗ್ಗುಳ ಹೊರುವೆನೆಂದು ವಿ । ಶಾಲಾಕ್ಷಿ ಆತುರದಿ ಕಂಡದೈವಕ್ಕೆರಗಿ । ಸಾಲು ದ್ವಿಜರುಂಡು ಬರುತಿರೆ ಅವರ ಬಲಕ್ಹಾಕಿ । ಮೇಲಾದ ಗಜವ ಎದುರಲಿ ಕಂಡು ಹಿಗ್ಗುತ್ತ । ತಾಳ ಘಂಟಾರವಗಳಾಲಿಸುತ ಪುಷ್ಪ ವನ। ಮಾಲೆಗಳು ಹೊತ್ತುಬರುತಿರೆ ಕಂಡು ಇಂದೆನಗೆ। ಸೋಲಿಲ್ಲ ಗೆಲುವೆಂದು ಕಾಲ ವೇಗದಿ ರಾಜ ಬೀದಿಯೊಳು ಬರುತಿರಲು । ಬಾಲೆ ಕಂಡಳು ಮಹಾದ್ವಾರ

ಪೊಡಮಟ್ಟು ॥ ದ್ವಾರಪಾಲಕರಿಂಗೆ ಬೇಡಿದುಚಿತವ ಕೊಟ್ಟು । ಸ್ವಾರಸ್ಯ ದಿಂದ ಸವಿಮಾತಿನಲಿ । ನಾರಿಯರ । ಉಪಚರಿಸಿಖೊಜ್ಜೆಯರ ಕರಿಸ್ಯ । ವರನಾದರಿಸಿ । ಸಂತೋಷಬಡಿಸಿ । ಪಾರಿಜೋದ್ಭವನ ಪಿತ ವಸುದೇವ ಸುತನೇರಿದ್ದ । ಸಿಂಹಪೀಠಕೈದುತಲ್ಲಿ ಅನುಸಾರಿಸೇವಗೆತಕ್ಕ । ನಾರಿ ಯರು ತಾರಾಮಂಡಲದೊಳಗೆ ಕೃಷ್ಣಾ । ತೊರ್ವ ವುಡುರಾಜ ಷೋಡಶ ಕಳೆಯುಳ್ಳ । ಚಂದ್ರನಂತಿರಲು ಮತ್ತೈಲವು ನಾರಿಯರು । ವೀಣಾತಂಬೂ ರಿಗಾಯನದವರು । ವಾರಿಜಾಕ್ಷಿಯರು ವಲಿದೊಲಿದು ಚೌರಿಯ ಮಾಳ್ಪ ವರು ॥ ತೋರವೊಲೆಯುವರು ತಬಕಗಳ್ಪಿಡಿದು ನಿಂದವರು । ಹಾರಹಿಡಿ ದವರು ಕಸ್ತೂರಿಗಂಧ ಜವ್ವಾಜಿ । ತೋರಿಕೊಡುವವರು ಹರುಷದಲಿ ಕುಂಚಿ ಕಾರಂಜಿ । ಸಾರೆಲಿಡುವವರು ಬಿಳಿಯೆಲೆ ಮಡಿಸಿ ಶೌರಿಯು ಕ । ಯ್ಯಾರೆ ಕೊಡುವವರು ಚಲ್ವೆಯರು । ದೂರದಲಿ ಪಿಡಿದು ನಿಂದಿಹ ಬೆಳ್ಳಿಯಬೆತ್ತದ । ನಾರಿಯರು ಸ್ವರ್ಣದಂಡವ ಪಿಡಿದ ನಾರಿಯರು । ಹಾ ರುಕ್ಮಿಣೀನಾಥ ದೀನಜನದಾತ । ಹಾ ಪಾರ್ಥಬಂಧು ಕರುಣಾ ದಯಾಸಿಂಧು । ಪರಾಕುಹೋಯೆಂದು ಹೊಗಳುವರು । ಸಂದಣಿಯ ಅಚ್ಯುತನು ಯೇರಿದ್ದಸಿಂಹಪೀಠದಲಿ ಕಂಡು । ಸೂರೆಗೊಂಡಳು ಸ್ವರ್ಗ ವೆಂಬಂತೆ ಕರ್ಪುರದ । ತೋರಬತ್ತಿಗಳ ಬೆಳಕಿನಲಿ ಶ್ರೀಹರಿಯ ಪಾದಕೆ । ದೂರದಿಂದಲಿ ನಮೋಯೆಂದಳು ॥ ೧ ॥ ಶ್ರೀಃ ॥

ರಾಗ ಕಾಂಬೋಧಿ, ರೂಪಕತಾಳ.

ಶ್ರೀಮತ್ಸದ್ಗುಣ ಸಾಗರ । ಕಾಮಿತಸತ್ಫಲದಾಯಕ । ಕಾಮಿನಿಕಳು ಹಿದಳೆನ್ನಾ ಸ್ವಾಮಿ ಪರಾಕೋ ॥ ೧ ॥ ಸತ್ವಾದಿಗುಣರಹಿತಾ । ನಿತ್ಯನಿರ್ಮ ಲಚರಿತಾ । ಸತ್ಯಭಾಮೆನ್ನಾ ಕಳುಹಿದಳೊ ಪರಾಕೋ ॥ ೨ ॥ ನಿರ್ಜರ ವಂದಿತಪಾದ । ಧೂರ್ಜಟಿ ಮನಕೆ ವಿನೋದಾ । ಅರ್ಜುನಸಖ ಅಬಲೆ ಕಳುಹಿದಳೂ ಪರಾಕೋ ॥ ೩ ॥ ನಂದಾನಂದನ ಜಯತು । ಕಂದರ್ಪಾ ಪಿತ ಜಯತು । ವೃಂದಾರಕವಂದ್ಯಾ ಮುಕುಂದಾ ಜಯಜಯತು ॥ ೪ ॥ ಪುಟ್ಟಿಸಿ ಪಾಲಿಸಿ ನಾಶವ । ದಿಟ್ಟಿಸಿಮಾಡುವೆ ವಿಶಿಷ್ಟಾಶಿಷ್ಟಜ್ಞಾನಕೆ ಸಿಲುಕ್ಕದವನೆ ॥ ೫ ॥ ಶ್ರೀಃ ॥

ರಾಗ ಮಾರವಿ, ದ್ವಿಪದೆ.

ಕೃಷ್ಣಾ ಗೋಪಿನಾಥ ಗೋಕುಲದರಸ । ಯದುಕುಲ ಶಿರೋಮಣಿ ಯಾದವರರಸ । ಎನ್ನಬಿನ್ನಹ ಲಾಲಿಸೋ ॥ ೧ ॥ ಯೆರಳೆಗಂಗಳೆಸಂಪಿಗೆ ಗರಳುಂಡಮರಿದುಂಬಿ । ಹೊರಳುವಂದದಿ ಹೊರಳು । ಶಿರಿ ಕಂಡು ಎನ್ನ ಜೀವ । ಮರುಗಿಬಂದೆನೊ ನಿನ್ನ । ಕರದೊಯ್ವ ಕಾರ್ಯಕ್ಕೆ ಮಾರ । ಸರಳುನಟ್ಟಿತು ಸತ್ರಾಜಿತಪುತ್ರಿಗೀಮಾತು । ಪರಿಹಾಸ್ಯವನು ಮಾಡಿ ಪದರಲಾಗದು ಅಂತಃ । ಕರುಣ ನೀನಿಟ್ಟು ತೆರಳುವದೆ ಸೌಖ್ಯ ॥ ಅರೆಘಳಿಗೆ ತಡದರಿ ಅವಳ । ಹರಣನಿಲ್ಲದೊ ನಿನ್ನ । ಚರಣಕೆರುಗುವೆನೇಳೊ । ಕರುಣಾರ್ಣವ ಕೃಷ್ಣಾ । ಕರಗುತಿದೆ ಕಂಡವರ । ಕಠಿನ ಮನಸಾದರು । ಸರಿ ನೀನು ಪ್ರಾಣದೊಲ್ಲಭ ಅವಳ । ವಿರಹತಾಪ ಕಂಡರಿನ್ನೆಷ್ಟು ಮರುಗುವಿಯೊ । ನೀ ಕಣ್ಣ । ಮರೆಯಲಿದ್ದರೆ ಕಾಣಿಸದು । ಕುಂದಣಕೆ ಸಮ । ಸರಿ ದೇಹ ನಸುಗುಂದಿ । ತುರುಬು ಕಟ್ಟದೆ ಕೇಶ । ಬೆನ್ನಿನಲಿ ಹೊರಳುತಿಹವೋ ॥ ಅನ್ನೋದಕವ ತೊರೆದಳೋ । ತಾಂಬೂಲದವಿವರವೇನು ನೆರೆದುಳುಹು ಬಾಲೆಯಳ । ಎರಡು ಕಣ್ಣು ಸಮನಾಗಿ ನೋಡು । ಈ । ಹರಿಣನೇತ್ರೆಯ ಅಪಸ್ವಾರ್ಥ ಮಾತುಗಳಂಗೀ । ಕರಿಸದಿರು ತನ್ನಂತೆ ಪರರ ನೋಡುವಳಲ್ಲ । ಹಿರಿಯ ಕಿರಿಯರೆಲ್ಲರು । ಮೆಚ್ಚರೀಕೆ ಮಾತು ಎನ್ನೊಡತಿ । ಕಾರ್ಯಕೆ ಅಡ್ಡಾಯಿದು ಕೆಡಸಲು ನೋಡಿ । ಧರಿಸಲಾರೆನು ಊಳಿಗವ ಮಾಡಿದರೆ ಎ । ನ್ನರಸಿ ಸತ್ರಾಜಿತಪುತ್ರಿಗಲ್ಲದೆ ಮಿಕ್ಕ । ಸರಸಿಜಾಕ್ಷಿಯರ ಪರವೇನು ಮಗುವಿನ ಮೇಲೆ । ಕರುಣವಿಲ್ಲ ಕೊಡು ನಿರೂಪವನೂ । ಅರಸ್ವಾದರಾಡಿದರೆ ಆನೆ ತುಡುಗಾದರೆ । ಪರಿಸಿಟ್ಟ ಬೇಲಿದ್ದು ಹೊಲ ಮೇವುತಿರಲು । ಪರಿಹರಿಸ ಬಲ್ಲವರಾರು ನಿನ್ನಿಂದ ನೀ । ತಿಳಿದರಲ್ಲದೆ ಹೇಳುವರುಂಟೆ ನಾ ಹೋಗಿ । ಬರುತೇನೆ ಯದುಕುಲಲಲಾಮ ದಯವಿರಲಿ ॥ ೧ ॥ ಶ್ರೀಃ ॥

ರಾಗ ಮಾರವಿ, ಆದಿತಾಳ.

ಬರುತಾನೆಂಕ್ಹೇಳೆ ಭಾಮಿನಿಗೆ ಬಾಯಮಾತಿನಿಂದ ॥ ಪಲ್ಲ ॥ ಸರಿಯಲ್ಲದಿಬ್ಬರು ತಾನೆ ನೆರವೆನೆಯನಗೆ । ಈ ಪರಿಯಲಿ ಉಭಯಸನ್ಮತ ಸಂಕಟಗಳು

ಅರುಹುವೇತಕೆ । ಕರಕರೆಯಮಾಡದೆ ಕಾಲಾನುಸಾರದಿ । ಇರುತಿರು ತೊಂದಿನಾ ಇವಳ ಸನ್ಮತಮಾಡಿ ॥ ೧ ॥ ವಲ್ಲಭೆಯಳ ಮುದ್ದಿಸಿಲ್ಲದಿದ್ದರೆ ವ್ಯಥೆ । ಅಲ್ಲಾವೆ ರುಕ್ಮಿಣಿಗೆ । ಅಲ್ಲಿಲ್ಲೆನ್ನಾದೆ ಎರಡು ಕಡೆಗೆ ನಾ। ಸಲ್ಲಾಡ ಲ್ಹ್ಯಾಗಿರಲಿ ಮಲ್ಲಿಗಿ ಮುಡಿದಳು । ಹಲ್ಲು ಕಚ್ಚಿದರೆಯಲ್ಲಿದ್ದರೆ ನಾನಿಂದಿನ ದಿನದಲ್ಲಿ ॥ ೨ ॥ ಕಂಗೆಟ್ಟು ಕಲಕನೀರನು ಕುಡಿದಲ್ಲಿರು । ರಂಗ ನಿನ್ನ ವನೆನ್ನೆ । ಅಂಗಸಂಗದಪೇಕ್ಷಕ್ಕೆ ತನಗಿಂತಧಿಕತುರವೆನ್ನೆ । ಹೆಂಗ ಸರಿಬ್ಬರು ಹೆಚ್ಚು ಕುಂದಿಲ್ಲ ಅರ್ಧಾಂಗಿನಿಯಳ । ಸಂಗಕ್ಕೆ ಗೋಪಾ ಲನೂ ॥ ೩ ॥ ಶ್ರೀಃ ॥

ರಾಗ ಕಾಪಿ, ತ್ರಿಪುಟತಾಳ.

ಚಿರಕಾಲವು ನಮ್ಮಾ। ಧೊರೆತನದೊಳು ಪಾರಂ ಪರ ಬಂದವಳೆಂದು । ಧರಿಸಿದೆ ನಿನ್ನಲ್ಪ । ಮಾತು ಬ್ರಹ್ಮನ ಪಟ್ಟ । ದರಸಿಯಾದರೆ ಬುದ್ಧಿ ಅರಿ ಸುವೆ ಪುಸಿಯಲ್ಲ ॥ ಪಲ್ಲ ॥ ವಲಿಮೆ ಬೇಕಾದರೆ ವಡತಿ ಕಾಲ್ಮೆತ್ತ್ರೊ ನ್ಮ್ಮೆ। ತೊಳೆದು ನಿನ್ನ ಕಾಯ । ಸಲಹಬೇಕಲ್ಲದೆ । ಛಲಕಾಗಿ ಚಾಪಲ್ಯ । ಬಲ ದಿಂದ ಮುದಿನರಿ । ಹುಲಿಯು ಕೂಡ ಜೈಸಿ ಬದುಕುವದೆ ॥ ೧ ॥ ಮಾನಿನಿ ಮಗುವೆಂದು। ಮನಕರಗಿದರೆ ನಿ। ಧಾನವಮಾಡಿ ಮತ್ತಿಷ್ಟು ಣಿಸ ಬೇಕಲ್ಲದೆ ॥ ಕಾನನದೊಳು ಕಡ್ಡಿ । ಮೆಲುವದು ಮದಸೊಕ್ಕಿ। ದಾನೆ ಕೂಡ ಸೆಣಸೇನು ಮಾಡುವದೆ ॥ ೨ ॥ ಕುನ್ನಿ ಹೊಡಿವದಕ್ಕೆ । ಬಣ್ಣದ ಕೋಲೇಕೆ । ಎನ್ನಾ ಊಳಿಗಾರೊಳೆ ಕಚ್ಚಿತೊಬ್ಬಳು ನೀನು ॥ ಕಣ್ಣೀ ರೊಡತಿಗೆ ಬಾಹಂತೆ ಕುಟ್ಟಿಸಿ ನಿನ್ನಾ। ಬಣ್ಣಾವ ಕಳೆವದಕೆ ಸೊನ್ನಿ ಡಿದಾವೆ ॥ ೩ ॥ ಶ್ರೀಃ ॥

ರಾಗ ಯರಕಲಕಾಂಬೋಧಿ, ಆದಿತಾಳ.

ರಾಮರಾಮರಾಮರಾಮ । ರಾಮರಾಮರಾಮರಾಮಾ ॥ ಪಲ್ಲ ॥ ಕಂಡು ಮಾತನಾಡಿದಾರೆ। ಕಡುಕೋಪವ್ಯಾತಕಮ್ಮಾ ಪುಂಡರೀಕಾಕ್ಷನ ಮಾರು ಕೊಂಡುತಂದಾಪ್ರಮಥ್ಯಾರು ॥ ೧ ॥ ನೋಡಿನೋಡಿ ತಂದೆತಾಯಿ ರೂಢಿ ಮೆಚ್ಚಿಕೊಟ್ಟಾರಮ್ಮಾ । ಓಡಿಬಂದಳೇನೆ ಸತ್ಯಭಾಮೆ ನಿನ್ನಾ ಒಲು ಮುನ್ನಾ ॥ ೨ ॥ ಯದುಕುಲೋತ್ತಮ ಕೃಷ್ಣಾ ಎಲ್ಲರೊಳಧಿಕನೆಂದು ।

ಮದುವೆಮಾಡೀಕೊಟ್ಟರಮ್ಮಾ। ಮನಕೆ ಬಂದಾ ವರನೆಂದು ॥ ೩ ॥ ಎದೆ
ಒಡ್ಡಾಹಲ್ಲುಬಾಯಿ। ತುದಿಗಾಣದಾಯಿತಮ್ಮಾ ॥ ಸುಪತಿಸೋತಫಲ
ಆದು ತಪ್ಪದಾಯಿತಮ್ಮಾ॥ ೪ ॥ ಎಷ್ಟು ಚಾಲ್ವರಿವಾಳೊ । ಕೃಷ್ಣ ಬರ
ಲಿಲ್ಲವೆಂದು। ಕೆಟ್ಟ ವೇಳ್ಯ ಗುಣಕಲಹಾ ಘಟ್ಟಿಸಿತೂ ನೋಡುನೋಡು ॥
॥ ೫ ॥ ಮಂದರೋದ್ಧಾರ ಕೃಷ್ಣಾ। ಬಂದರಂತೂ ಒಳ್ಳಿತಮ್ಮ। ನಿಂದರೆನ್ನಾ
ಅಪಮಾನಾ । ಮಂದಿಯೊಳಗಾಯಿತಮ್ಮಾ ॥ ೬ ॥ ಮುಚ್ಚುತಲೆಗೇರಿತಿ
ಮಳಾ। ಇಚ್ಛೆ ಅರಿತಾಡುವನಮ್ಮಾ। ಅಚ್ಯುತಂಗೆ ಮದ್ದುಮಾಡಿ ಹುಚ್ಚು
ಮಾಡಿಬಿಟ್ಟಳಮ್ಮಾ॥ ೬ ॥ ಶ್ರೀಃ ॥

ರಾಗ ಕಾಪಿ.

ಎನ್ನ ಮೇಲೆ ವ್ಯಥಿಕರಣ ನುಡಿದಳೇದೂತಿ। ಪನ್ನಗಾಶಯನ ನೀ ಕಿವಿ
ಕೊಟ್ಟು ಕೇಳಿದ್ಯೋ। ಇನ್ನಿವಳನಾಳುತಿಹಳು ಎನ್ನ ಸರಿಯೆ। ಕುನ್ನಿಯಿ
ನ್ನಾವ ಲೆಕ್ಕದೊಳೆಂದು ರುಕ್ಮಿಣಿಯು । ತನ್ನ ಪ್ರಾಣಕಾಂತನೆದುರಿಲಿ
ನಿಂತಿರ್ವ ದೂತಿಯನು । ಬಣ್ಣಬಣ್ಣದಲಿ ಭಂಗಿಸಿದಳಾಕ್ಷಣದಿ ॥ ೧ ॥

ರಾಗ ಶಂಕರಾಭರಣ, ಆದಿತಾಳ.

ಏನೆಂದು ಹೇಳಾಲೆ ಎನ್ನಾ। ಪ್ರಾಣದರಸಿಗೆ। ಏನೆಂದು ಹೇಳಾಲೆ ಎನ್ನಾ।
ಪ್ರಾಣದರಸಿಯಾದಾ ಮುದ್ದು। ಮಾನಿನಿ ಸತ್ಯಭಾಮೆಗೆ। ಹೀನ ಸುದ್ದಿ
ಯಾನೆ ಕೊಂಡು ॥ ಬಂದಾನೆಂದು ಬಹುಬಗೆಯ ಭರವಸ। ನಾನಾಡಿ
ದರೆ । ಸುಂದರಿ ಕರತಾರದ್ಯಾಕೆ ಬಂದಿಯೆಂಬೊಳು । ಸಂಧಾನವಾ
ಗಲಿಲ್ಲೆಂದು ಸತ್ಯಾವಾಡಿದರೆ ಅಕ್ಕೆ । ತಿಂದಾಯಿಲಿಯಂತೆ ವನಿತೆ ।
ಅಯ್ಯಯ್ಯೊ ಮರುಗುವಾಳೂ ॥ ೧ ॥ ಕದ್ದುಕನ್ನಾವಿಕ್ಕಾಲಿಲ್ಲಾ ಬುದ್ಧಿತಪ್ಪಿ
ನಡೆಯಲಿಲ್ಲಾ। ಇದ್ದ ಸಹಸವನೆಲ್ಲ ಬಿದ್ದು ನೋಡಿದೆ॥ ಸಾಧ್ಯಾವಾಗಾದ
ದಕೆ ಸತ್ಯಾ। ಭಾಮೆಯನ್ನಾ ಏನೆಂಬೊಳೂ ॥ ನೀರಾ ಹೊರಗೆ ಬಿದ್ದಾ
ಮೀನಮರಿಯಂತೆ ಸುದ್ದಿಯಿಲ್ಲಾದ್ದೊರಳುವಾಳೂ ॥ ೩ ॥ ಕಣ್ಣನೀರು
ಕುಕ್ಕಿಕೊಳುತ । ಸುಣ್ಣಾ ತಿಂದಾ ಕಪಿಯಂತೆ । ಎನ್ನಾ ಇರವ ಕಾಣುತಾ
ತಾನೇನೆಂಬೊಳೊ॥ಬಣ್ಣ ಬರಲಿಲ್ಲವೆನಗೆ।ಬಯಸಿಹೋಗಿ ತಿರುಪತಿಯಾ।
ಕಣ್ಣು ಹೋದ್ಹಾ ದಾಸನೆರಡು। ಕಾಲಾಬಿದ್ದಾ ಬಂದಾ ಸುದ್ದಿ ॥ ೩ ॥

## ವಚನ.

ಇತ್ತಲೀಕಾರ್ಯದೊಳು । ಸುತ್ತಿತೊಳಲುವ ದೂತಿ । ಚಿತ್ತವಿಭ್ರಮವು ಳಾಗಿ ತಿರುಗುತಿರೆ ಅಕಟ ಬಹ । ಳ್ಹೊತ್ತಾಯಿತು ಏನು । ಕಲಹ ಪಸರಿಸಿ ತೆಂದು । ಸತ್ರಾಜಿತಕುವರಿ ತನ್ನ । ಮಿತ್ರೆಯರ ಕರೆದು ಮಾಡಿದಳು ಪ್ರಶ್ನೆ ಯಸು ॥ ೧ ॥ ಶ್ರೀಃ ॥

### ರಾಗ ನೀಲಾಂಬರಿ ತ್ರಿಪುಟತಾಳ.

ಕೆಂಯಾಹೋದದೂತೆತ್ತಾಲಿ ತಡದಾಳೊ । ಕಾರ್ಯ । ದ್ಧರಿಯಾ ಹೇಳಿ ರವ್ಮಾ ಕುಳಿತಹಿರಿಯಾರೂ ॥ ಪಲ್ಲ ॥ ಕರಕರೆಗಾರಾದೆ ದೂತಿ ಹೋದಾ ಳೊ । ಅಂಗೀ । ಕರಿಸಿ ಮನಸಾ ವಾಚಾ ಪಯಣವಾದಳೊ । ಹರಿಯೀ ಕಗ್ಗ ತ್ತಲೆನ್ನೆನಿಂತಾಳೊ । ಮುರ । ಹರಗೆನ್ನಾ ತಾಪಾವುಬಿನ್ನೈಸಿದಾಳೊ ॥ ೧ ॥ ಬಾಗಾಲಿಗೆ ಬೀಗಮುದ್ರೆಯಾದಾವೊ । ಕೂಗಿ । ಹೋಗುವದಕೆ ಲಜ್ಜೆ ಯಾದಾವೊ ॥ ಹೋಗಬ್ಯಾಡಾವೆಂಬಾರ ವ್ರೂಳಿಗಾವೊ । ವಿಷಯ । ಭೋಗಕೆ ಸಿಲ್ಕಿ ನಿಂತಾಸೋಜಿಗಾವೊ ॥ ೨ ॥ ಕಂಡು ಕೇಳಿ ತಾತ್ಸಾರ ಮಾಡಿದಾನೊ । ಕೃಷ್ಣ । ಕೊಂಡೆಗಾರತಿ ಮಾತಾ ಕೇಳಿದಾನೊ । ಉಂಡುಬಾಹೆನೆಂದಾಸೆ ದೋರಿದಾನೊ । ಮರತು । ಕೊಂಡು ಗೋಪಾ ಲಕಿಯ ಕೂಡಿದಾನೊ ॥ ೩ ॥ ಶ್ರೀಃ ॥

### ಸೀಸಪದ್ಯ.

ಮೆಲ್ಲಕಟ್ಟೆನಿಂದೆಸೆವ । ಸಾಲ್ಮುತ್ತುಗಳನೋಡಿ । ತಾಳದೆನ್ನಯ ಮನಸು । ತಂಗಿಗಳಿರಾ ॥ ಕಾಲ್ತೊಳೆವ ಕೈದಸ್ತು । ಕೈಗಿಂಡಿಕಾಳಂಜಿ । ಈ ವೇಳ್ಯ ವೈಪರ್ಯ । ಅಹದವ್ಮಾ ॥ ಕಾಲ್ಗಳಿವೆ ನವರತ್ನ । ಖಚಿತವೆ ಪರಿಯಂಕ । ಮೇಲಿದ್ದ ಶಯ್ಯೆಮಯಿ । ಗಾಗದವ್ಮಾ ॥ ತಾಳಪರಿಮಳದಿಂದ । ತಾಪ ಹೆಚ್ಚುತಲಿದಕೊ । ಜ್ವಾಲೆಯಿಂದಧಿಕ ಚಂ । ದ್ರಿಕೆಯು ನೋಡೆ ॥ ೧ ॥ ಮಂ ದಮಾರುತನೆನಗೆ । ಇಂದ್ರನೊಜ್ರಾಯುಧವು । ಚಂದ್ರಮುಖಿ ಚಂದನದ । ಛಳಿಗಳ್ಯಾಕೆ ॥ ಕುಂದಕುಸುಮಜಾಜಿ । ಮಲ್ಲಿಗೆ ಸರಗಳರ । ವಿಂದ ಮುಖಿ ಸೂಜಿಯಂ । ತೊತ್ತುತಿಹವೆ ॥ ನಂದಕುವರನಿಲ್ಲ । ದಾನಯದ

ವಸ್ತುಗಳ್ಯಾಕೆ । ಅಂದಚಂದಗಳ ಇನ್ನಾರಿಗಾಗಿ ॥ ಕಂದರ್ಪಪಿತ ಕ್ರೋಧವಾ । ಡಿದನ್ಯಾಗೆ ಜೀವಿಸಲಿ ॥ ಮಂದಯಾನೆಯರಿದಕುಪಾಯ । ಚಿಂತಿಸಿರೆ ॥ ೨ ॥ ಶ್ರೀಃ ॥

ರಾಗ ಮೋಹನಕಲ್ಯಾಣಿ, ಅಟತಾಳ.

ಮನ್ಮಥನಳುವಾಗಲಿಲ್ಲವೆ ಎನ್ನೆಥೆ । ಪೇಳಾಲದು ವಶವಲ್ಲವೆ ॥ ಪಲ್ಲ ॥ ಉರಿಗಣ್ಣಿನಿಂದವ ಬಿದ್ದನೆ । ಸ್ಮರ ಮನಸಿಜನಾಗಿ ತಾನೆದ್ದನೆ ॥ ಸಿರಿದೇವಿಯಲಿ ಜನಿಸಿದ್ದನೆ । ಸುರ ವೈರಿಯಿರುಳವನ ಕದ್ದನೆ ॥ ೧ ॥ ಹರಿವಾರಾಂಬುಧಿಯೊಳವನಬಿಟ್ಟನೆ । ನೆರೆ ಮೀನು ನುಂಗಿತು ಥಟ್ಟನೆ ॥ ಕೊರವುತಿರಲು ಬಾಯಿಬಿಟ್ಟನೆ । ಸರಿಯಾಗಿ ರತಿಗೆ ಮುದ್ದಿಟ್ಟನೆ ॥ ೨ ॥ ಚಂದ್ರಮುಖಿಗ್ರಾಸವಾಗಲೆ । ಮಂದಾನಿಲನ ಸರ್ಪನೀಗಲೆ ॥ ಕಂದಗಳು ಬಿಲ್ಮುರಿಲೆಂದುತೇಗಲೆ । ಸುಂದರಗೋಪಾಲಗೆ ಕೂಗಲೆ ॥ ೩ ॥

ರಾಗ ಬೇಗಡೆ, ಅಟತಾಳ.

ಕುಸುಮಶರನಂಥಾ ಕ್ರೂರನ ಕಾಣೆನೆ ಕೋಕಿಲವಾಣಿ । ವಸುಧೇಶನಿಲ್ಲದ ಸಮಯವು ಸಾಧಿಸಿದನೆ ವೈರಿಯಾದನೆ ॥ ಪಲ್ಲ ॥ ಒಂದು ನಿಮಿಷದವಧಿಯು ಎನ್ನೊಳಗಾಡಿ । ಚುಂಬನಪೀಯೂಷದಾಸೆಯ ಮಾಡಿ । ರಂಗ ಶಶಿಮುಖಿಯಳ ಮಂದಿರಕೋಡಿ ಬಾರ । ದ್ವ್ಯಸಿಯಾಗಲು ಬಿಲ್ಲುಬಿಗಿದಾ ಬಾಣವಗದಾ । ಬಾಧೆಯಬಡಿಸಿದ ಕೋಕಿಲಗಾನೆ ॥ ॥ ೧ ॥ ಕಾಂತೆಯೆನ್ನೊಳು ಕೂಡಿದ್ದರೆ ಕಾಮನು ಸ್ನೇಹಾ । ಎಂತು ಜಲಮಧ್ಯದಿ ಬಿಸಜಕೆ ಭಾನುವಿನ ಮೋಹಾ ॥ ಇಂತು ಹುಸಿಯಲ್ಲ ಇವ ಕಟುಕನು ಮಹಾ ಬಹಳ । ಚಿಂತೆಯಿಂದಲಿ ಧಿಗಿಲ್ಬಿಡಿಸಿದ । ಭ್ರಾಂತಿಗೊಳಿಸಿದಾ ಮೂರ್ಛೆಯಗೈಸಿದ ಕೋಕಿಲಗಾನೆ ॥ ೨ ॥ ಸುದತಿ ನೀ ಕೇಳಿದುಕುಲಾಬ್ಧಿಚಂದ್ರನೆ । ಪದರದಲೆ ತಾನಾಡೀದವಧಿಗೆ ಬಂದಾನೆ । ಮಧುರವಚನದಿ ಮುನಿಸು ತಿಳುಹಿ ಮನ್ನಿಸಿದಾನೆ ॥ ಮಧುಮರ್ದನ ಗೋಪಾಲರಘಳಿಗಿಲ್ಲದಲಿರೆ ಕಾಡಿದನೀರೆ । ಕೂಡಲುಬಾರೆ ಆಗಲಿವ ನಮಗೆದುರೆ ಕೋಕಿಲಗಾನೆ ॥ ೩ ॥ ಶ್ರೀಃ ॥

ವಚನ.

ರದ್ದು ಕೈಯುಟ್ಟು ಹಾದಿಯ ನೋಡುತೀಪರಿಯ । ಸುದ್ದಿಯಲಿ ನಿಮಿಷ ಯುಗವಮಾಡಿದೊಬ್ಬುತ್ತ । ಯೆದ್ದುಕುಳಿತಿರೆ ಹೋದ ದೂತ್ಯರ್ಧರಾತ್ರಿ ಯೋಳ್ । ಸದ್ದುಮಾಡದೆ ಬರಲು ಕದ್ದಕಳ್ಳಿಯ ಮುಖ । ಪೋಲ್ವಡಿಯ ಕಂಡು ನೀ ಬಂದಿ ಕೃಷ್ಣನು ಬಾರದುದ್ಯೋಗ ಸುದ್ದಿಹೇಳೆಂದು ಬೆಸಸಿ ದಳು ಕಂಗೆಡುತಾ ॥ ೧ ॥

ರಾಗ ಪೂರ್ವಿ, ಆದಿತಾಳ.

ಅಲ್ಲಿ ವೃತ್ತಾಂತಹೇಳೆ ಆಲಿಸಿ ಮನಸು । ನಿಲ್ಲಾದೆನ್ನಾ ಮಾತು ಕೇಳ ಲಾಲಿಸಿ ಅಮ್ಮಾ ॥ ಪಲ್ಲ ॥ ಬಂದಿಯಾಕೆಂದು ನಿನ್ನಾ ನುಡಿಸಿದಾನೆ ಮಾನಾ । ಎಂದಿನಂತೆ ಕೊಟ್ಟು ಪ್ರೀತಿಬಡಿಸಿದಾನೆ ನೀ । ನಂದಮಾತು ಗಳಂಗೀಕರಿಸಿದಾನೆ ಅವಳ । ಮುಂದೆನ್ನಾಭಿಡಿಯಾವಿಟ್ಟಾನೆ ಮರ್ಮ ಗಳಾಡಿ ಬಿಟ್ಟಾನೆ ॥ ೧ ॥ ಕರುಣ ನನ್ನಲಿಪ್ಪನ್ನಾ ತೋರಿತೆ ಅಥವಾ । ತರುಣಿಯ ಮುದ್ದು ತಲೆಗೇರಿತೆ ನನ್ನಾ । ಸರಕುಸವತಿಯ ಮುಂದೆ ಮಾರಿತೆ ಎನ್ನಾ । ಸರಿಯಾಗಿ ನೋಡ್ವೆನೆಂದಾನೆ ಸುದತಿ ಕಟ್ಟೆಗೆ ಬಿದ್ದಾನೆ ॥ ೨ ॥ ಸುಮ್ಮಾನಿದ್ದಾಳೆ ನನ್ನಾ ಸರಿಗರತಿ ಗರ್ವಾ । ಹಮ್ಮು ನಾಡೋ ಅಲ್ಲಿ ಮಾಡಳು ಕೊರತಿ ಕಲಹಾ । ನಿರ್ಮಿಸಿ ಕಾಂತಾ ನೋಡೀದನೆ ಅರುಥಿ ಹೇಳೆ । ಕಮ್ಮಗೋಲನಯ್ಯನ ಕಲತು ಮೆಟ್ಯಾ ಳವಳವೇನಾ ॥ ೩ ॥ ಆರಾನಾಗಾಲಾ ನಿನ್ನಾ ಸಲಹಿದೆನೆಂಬಾ । ಪಾರಾ ನಂಬಿಗೆಯಿಂದಾ ಕಳುಹಿದೆ ನನ್ನಾ । ಸೇರಿದಾ ಬಿರುದೇನುವುಳುಹಿದೆ ಬಂದಾ । ದೂರನಾನೊಹಿಸುತಿರ ನಾರಿ ನಿನಗಾರೆದುರೆ ॥ ೪ ॥ ನಂದಾ ನಂದನನು ಏನಂದನೆ ಮಾಜಾ । ಲಂದಾವಲ್ಲಾವೆ ಯಾಕೇ । ದಂದನೆ ಜೀವಾ । ಹೊಂದಾದಿದೆಲ್ಲಿಯ ಬಂಧನ ಎನ್ನಾ । ಕಂದರ್ಪನಯ್ಯ ಗೋಪಾಲಾ ಮಾಡೀದಾ ಮನ್ಮಥನಾಪಾಲಾ ॥ ೫ ॥ ಶ್ರೀಃ ॥

ರಾಗ ಶಂಕರಾಭರಣ, ಅಟತಾಳ.

ಬಂದೆನೇ ಪ್ರಾಣನಾಥನಾ । ನಂದವಾ ಕಣ್ಣಲಿ ನೋಡಿ । ಕಂದರ್ಪಾನ ಟ್ಟುಳಿ ನಿನ । ಗೆಂದುದುರಸಿಂದ ಪೋಗಿ । ನಾ ಬಂದೆನೆ ॥ ಪಲ್ಲ ॥ ಪಟ್ಟಸಾಲೆ

ಯೊಳು ಮೇ। ಲ್ಕಟ್ಟಲಕ್ಷ್ಮಿವೆ ಬಾಳ್ವದು। ಪಟ್ಟೆಮಂಚಕೆ ವಜ್ರದಾ। ದಟ್ಟೆತವಾದ ಕಾಲ್ಗಳೂ। ವಟ್ಟೆದ್ದಾಸೂವರಳೆ ಸುಪ್ಪತ್ತಿಗೆ ತಗಟೆತಲೆ ದಿಂಬು। ಕಟ್ಟೆದಾ ಮುತ್ತಿನಾ ಗೊಂಚಲು। ಸುತ್ತಲ್ಹಾಸಿಕೆವಲ್ಲಿಗೆ। ಇಟ್ಟೆ ಕಸ್ತೂರಿತಿಲಕಡ। ಧಿಟ್ಟನಾಕೂಡ ತೊಡೆಮೇಲೆ। ಪಟ್ಟದರಸಿ ರುಕ್ಮಿಣಿ ಪರಮವಯ್ಯಾರದಿಂದಾ। ಇಟ್ಟ ಆಭರಣವು ನಾ। ನೆಷ್ಟು ವರ್ಣಿಸೂವೆನಮ್ಮಾ। ಕೃಷ್ಣನಾ ಪ್ರೇಮ ಆಕೆಯಲ್ಲಿಷ್ಟು ಇಷ್ಟೆಂದಲ್ಲಾ ವಮ್ಮಾ॥ ಸೃಷ್ಟಿಗೆ ಸ್ವಾಮಿ ಅವಳ ಕಟ್ಟಳೆಯೊಳಾದ। ಅಷ್ಟವೈಭೋಗ ವನೋಡಿ। ಆದನು ಸೈರಿಸದಲೆ ನಾ ಬಂದೆನೇ॥ ೧॥ ಮಂದಗಮನೆರಾ ಬಹಳ। ಸಂದಣಿಯಲ್ಲಿ ಕೆಲವಾರು। ಗಂಧ ಕಸ್ತೂರಿ ಜವ್ವಾಜಿ। ತಂದು ಬಟ್ಟಾಲಲ್ಲಿಡುವಾರು। ಕೆಂದಾವರೆಪುಷ್ಪಾ ಕನಕಾ ಕೆರಸೆಯಲ್ಲಿ। ತಂದಿಟ್ಟು। ಚಂದನಾಗಂಧಿಯಾರೆಲ್ಲ ಚಾಮರ ಬೀಸುತಿಹರು। ಚಂದ್ರ ಬಿಂಬವು ಪೋಲ್ವ। ಚಲುವಾ ಹಾಸಿಕೆಮೇಲೆ। ನಿಂದು ಸುವಾಸಿನಿಯರು। ನೃತ್ಯವಾ ಪಾಡುತಿಹರು। ಅಂದವಾದ ಹೊತ್ತು ನೋಡ ಲ್ಲಿಂದೆನಾ ಸ್ನೇಹವಮಾಡಿ। ನಂದಗೋಪನ ಸುತಗೆ ನೀ ಬರೆದಿದ್ದ ವಾಲೆಯೂ। ಬಂದು ಬಳಿಯಲಿ ನಿಂತೂ। ಬಾಯಮಾತಾ ಹೇಳುತಲಿ। ಅಂದುಕೊಟ್ಟಾರೆ ನೋಡದಲ್ಲಾಗಲೆ। ತಾತ್ಸರಿಸಲು ನಾ। ಬಂದೆನೆ॥ ೨॥ ಸ್ಮರನ ತಾಪದಿಂದ ಬಹಳ। ಸೊರಗಿದಾಳೆಂದು ಹೇಳಿದೆ। ಇರಳುಹಗಲು ನಿದ್ರಾಹಾರವಾ। ತೊರೆದಾಳೆಂದೆ। ಮರಿಯಲಾಗದೆಂದು ಕೆಲವು। ಮರಮಾತುಗಳ್ಹೇಳಿದೆ। ಸರಿಯಾಗೆರಡುಕಣ್ಣಾಸಮನಾಗಿ ನೋಡೆಂದೆ। ಅರಿಯಾದೆ ಸತ್ರಾಜಿತ ನಿ। ನ್ನರುವಿಕೆಯನು ಮೆಚ್ಚಿ। ಧುರ ಸವತಿಯ ಮೇಲೆ। ತರಳೆ ಒಪ್ಪಿಸಿಕೊಟ್ಟ। ಧೊರೆಯಾದರೆ ನಿನಗೆ। ಶರಣೆಂಬೆನೊ ಅನ್ಯಾಯ। ಥರವಲ್ಲಾವೆಂದು ಮೋರೆ। ಇಂದಿರಿದು ಆಡಿದೆ। ಪರಿಪರಿ ನ್ಯಾಯನಿಷ್ಠುರಮಾಡೆ ರುಕ್ಮಿಣಿಗೆ। ಅಂಕಿಲ್ಲದೆ ಗೋಪಾಲನ। ಅರಮನೆಗೆ ಬರಹೇಳಿ ನಾ ಬಂದೆನೇ॥ ೩॥ ಶ್ರೀಃ॥

ಶ್ರೀರಾಗ, ಆದಿತಾಳ.

ಮುಗುವೇ ನೀಹೋಗಿ ಮಾಧವನಾ ಬಳಿಗಮ್ಮಾ। ಹಗರಣದ ಸುದ್ದಿ ತಂದು ಹರವಿದೆಯಲ್ಲಮ್ಮಾ॥ ಪಲ್ಲ॥ ಕರೆಯಾ ಹೋಗೆಂದೂ ನಿನ್ನ।

ಕರದೆನಲ್ಲವಮ್ಮಾ। ನೆರೆಮನೆಯಲ್ಲಿ ಛಟ್ಟನೆನಗುತರವಮ್ಮಾ॥ ಹೊರಗ್ಹೋಗ ಲಿಕ್ಕೆ ವಾಯಸ ಕಟ್ಟಿತಮ್ಮಾ। ಶ್ರೀ। ಹರಿಬಾರೆನೆಂದಾಗ ಅರಿದೆನಲ್ಲ ಮ್ಮಾ॥ ೧॥ ಬಲಗಣ್ಣು ಬಲಭುಜ ಬಿಡದ್ಹಾರಿತವಮ್ಮಾ। ನಾ। ಮಲಗೋ ಮಂಚದಲಿ ಸ್ವಪ್ನವ ಕಂಡೆನವಮ್ಮಾ॥ ಕಿಲಿಕಿಲಿ ನಕ್ಕೆದ್ದು ಕೇಡಾಯಿ ತವಮ್ಮಾ। ಚಲುವ ಕೃಷ್ಣಯ್ಯಾ ಬಾರದ ಫಲವವಮ್ಮಾ॥ ೨॥ ನಂಬಿದ್ದೆ ನವ್ಮ್ಮ ನಾನು ನಿನ್ನೀರುಳಿಲ್ಲಾ। ಅಂಬುಜಾಕ್ಷನಾ ತಾರದೆ ಬಾಹ ಳಲ್ಲಾ। ಶಂಬರಾರಿಯಾ ಮುಪ। ದಂಬಿಗೆ ನೀವೆಲ್ಲಾ। ಕಣ್ಣು। ತುಂಬಾ ನೋಡುತಲೆನ್ನ ಒಪ್ಪಿಸಿದಿರೆಲ್ಲಾ॥ ೩॥ ರತಿಪತಿಪಿತನೆಂದು ನಂಬಿದೆ ನವ್ಮ್ಮಾ। ನಾ। ಗತಿಯೆಂದು ಅವನಿಗೆ ಮರೆಹೊಕ್ಕೆನವ್ಮ್ಮಾ॥ ಕೃತಕ ಮಾಡಿದಳೆನ್ನಾ ಕೆಟ್ಟಾ ಸವತ್ಯವ್ಮ್ಮಾ। ಶ್ರೀ। ಪತಿಯಾ ಕಾಣದೆ ಹ್ಯಾಗೆ ಸೈರಿಸಲವ್ಮ್ಮಾ॥ ೪॥ ಸಾಮುದ್ರಿಕೆ ಕೇಳಿ ಸಾವಿರಾ ಕೊಟ್ಟೆ। ನಾ। ಸ್ವಾಮಿ ಪಾದದಲೆನ್ನಾ ಮನವಾ ವೈದಿಟ್ಟೆ॥ ಭೂಮಿದೇವರಿಗೆ ಆಡಿ ದ್ದೆಲ್ಲಾ ಕೊಟ್ಟೆ। ಶ್ಯಾಮವರ್ಣಗೆಯೆನ್ನ ಮನಸೂರೆಬಿಟ್ಟೆ॥ ೫॥ ಕಾಳಿಕಾ ದೇವಿಯ ನಮಿಸಿ ನಾ ಸೋತೆ। ನಾ। ಕಾಲಾರುದ್ರನ ಸತಿಗೆ ಕನಕವನೆರದೆ॥ ವೇಳ್ಯವರಿತುಂಬೋ ಊಟವನೆಲ್ಲಾ ಜರೆದೆ। ನಾ। ಜಾಲಮಾಲೆಯಲಿ ವೈಸ್ಮರಣೆಯು ಮರದೆ॥ ೬॥ ನೋತಾ ಫಲವಲ್ಲದೆ ನಾಯಥೇಷ್ಟನಾ। ಬರೆ। ಮಾತು ಹೇಳಿದರೇನು ಬಯಲಾ ದುಃಖವ್ಮ್ಮಾ॥ ಯಾತಕೆ ವಿಧಿಯೆನ್ನ ಪುಟ್ಟಿಸಿದನವ್ಮ್ಮಾ। ಅ। ನಾಥೆ ಉಸುರವನಿಗೆ ಮುಟ್ಟಾಲೆ ಯವ್ಮ್ಮಾ॥ ೭॥ ಚಿಕ್ಕಾವಳೆಂದೆನ್ನ ಚರ್ಚೆಮಾಡಿದನೆ। ತ। ನ್ನಕ್ಕಾರಿದ್ದಲ್ಲಿ ಊಳಿಗವಾ ಮಾಡುವನೆ॥ ಅಕ್ಕಾ ಅವಳಲ್ಲೀ ಗುಣವೇನು ನೋಡಿದನೆ। ಮದ। ಸೊಕ್ಕಿದವಗ್ಯಾತರ ನ್ಯೂನಾಪೂರ್ಣಗಳೆ॥ ೮॥ ನಿದ್ದೆಯೆಂ ಬುದು ಕಣ್ಣಿ। ಗಿದ್ದಿಲ್ಲವವ್ಮ್ಮಾ। ನಾ। ನೆದ್ದೂ ಮಂಚದಲೊರಗಿದ್ದಿರು ಳವ್ಮ್ಮಾ। ಸದ್ದೂಸಪ್ಪಳವಾನಾಲಿಸುತಿದ್ದೆನವ್ಮ್ಮಾ। ನಾ। ಹದ್ದೂಗೈಯಿಟ್ಟೊ ಕದಹೊಂದಿದ್ದೆನವ್ಮ್ಮಾ॥ ೯॥ ಮಂದಮಾರುತ ಎನಗೆ ಇಂದ್ರಾಯುಧ ವವ್ಮ್ಮಾ। ಈ। ಚಂದ್ರತಾಪದಿ ಬಹಳ ಬೆಂದೆ ಕಾಣವ್ಮ್ಮಾ॥ ಗಂಧಲೇ ಪನವೆನಗೆ ಗಂಡಾಂತ್ರವವ್ಮ್ಮಾ। ಅರ। ವಿಂದನಾಭನ ಕಾಣದ್ಯಾತರ

ಜನ್ಮಾ ॥ ೧೦ ॥ ಪೂರ್ಗೋಲಸಯ್ಯನ ಪುಣ್ಯಾದಿಂದವಮ್ಮಾ । ಭೋಗ ಮಂದಿರವೂ ಬ್ಯಾಸರಿಕ್ಹುಟ್ಟಿತವಮ್ಮಾ ॥ ಆಗಲಿನ್ನೊವ್ಮೆ ನೀ ಹೋಗಿ ಬಾರಮ್ಮಾ । ಮನೋ । ರೋಗಾ ಬಿಡಿಸೆನ್ನಾ ನೀ ಕಾಯಿದುಕೊಳ್ಳವಮ್ಮಾ ॥ ೧೧ ॥ ಮಾತು ಸೈರಿಸದೊಂದು ರೀತಿತಿಳಿಯದೆ । ಕಾ । ವೂತುರ ದಲ್ಲಿ ಮನ ಕಂಗೆಡುತಿಹುದೆ । ಯಾತರ ಬದುಕವಮ್ಮಾ ಎಲ್ಲಿಯಾ ಧರ್ಮಾ । ಶ್ರೀ । ನಾಥಗೇನೆನಲವಮ್ಮಾ । ಇದು ನನ್ನ ಕರ್ಮಾ ॥ ೧೨ ॥ ದೂತಿ ಶ್ರೀಕೃಷ್ಣಾ ನಿಜನಾಥ ನನಗವಮ್ಮಾ ಆತೂರಕಾಗದ್ದು ಆಶ್ಚ ರ್ಯವವಮ್ಮಾ ॥ ಸೋತುಬಾಹದಕೆ ಫಲಕಾಲ ಬೇಕವಮ್ಮಾ । ಆತ ಗೋಪಾಲಾ ವಂಚನೆಗಾರನವಮ್ಮಾ ॥ ೧೩ ॥ ಶ್ರೀಃ ॥

ರಾಗ-ಭೈರವಿ, ಆದಿತಾಳ.

ಸಾಮಾದಿಂದಲವನಾ ಪ್ರೇಮಾ ಸಂಪಾದಿಸೆ ಕಂಡ । ಕಾಮಿನಿಯರ ಮಾತಿಗೆ ಕಲಕದೀರವಮ್ಮಾ ॥ ಪಲ್ಲ ॥ ರಚ್ಚೆವಳ್ಳಿದಲ್ಲೆ ಅವಗೆ । ಮತ್ಸರ ಹುಟ್ಟೋದೇ । ಮುಚ್ಚುಮರೆಯೆಂಬೋದು ಬಹಳ ಚ್ಚು ಕಾಣಿಸೋದೆ । ಮಚ್ಚುನುಂಗಾವಾರೆ ಅವನಾ । ಇಚ್ಛೆ ನಿನ್ನಾ ಮೇಲೆ । ಕುಚ್ಛಿತಬು ದ್ಧಿಯು ನಿನಗೆ । ಕಲಿಸುವಾರು ಬಹಳ ॥ ೧ ॥ ಗಂಡುಸಲ್ಲಾವೇನೆ ಮಾ । ರ್ಕೊಂಡಾವಾಳು ನೀನೆ ಭೂ । ಮಂಡಲನಾಳೂವಗ್ಯಾಕೆ ನಿನ್ನ ಮುಗು ದಾಣೆ ॥ ಅಂಡೊಲಿದು ಅಷ್ಟರೊಳು । ಭಂಡಾಳಾಗಾದೀರೆ ನಿನ್ನ । ಮುಂಡೆ ಕುಕ್ಕಿ ಬೋಧಿಸುವ । ಮಿಂಡೆರ್ಯೆದಾರೆ ॥ ೨ ॥ ಹಲವನಾಡಬೇಡ ಪ್ರೇಮ । ಕಲಹವೆಂದು ತಿಳಿಯೆ । ನಳಿನಮುಖಿ ನಿನ್ನ ಮನದ । ಛಲವನೆಲ್ಲಾ ಕಳಿಯೆ ॥ ಕುಲಸತಿ ನೀನುಂಟಾದರೆ । ಕುಶಲದಿಂದಲವನಾ । ವಲಿಮೆ ತಿಳಿದುವಾಗ್ಮಧುರದಿ । ಕೂಡೆ ನೀ ಮಾಧವನಾ ॥ ೩ ॥ ಅಂದರೆ ನೀಯೆನ್ನ ಮೋರೆ । ಮುಂದಾಗಡಿಯಾಲನ್ನೆ । ಕಂದರ್ಪನಂಬಿಗೆ ಸಿಲ್ಕಿ । ಬಳಲದ್ದಾ ವಾಹೆಣ್ಣೆ । ಅಂದಾವಲ್ಲಾ ತವಕಾ । ಮನದೋಳಾಲಿಸಿ ಕೇಳವಮ್ಮಾ । ನಂದಕುವರ ನಿನ್ನ ಮನದಾ । ನಯುವನೋಡಬ್ಯಾನವಮ್ಮಾ ॥ ೪ ॥ ಸವತಿ ಯೆಂಬ ಶೂಲ ಸಲ್ಲದವಮ್ಮಾದಾರಿಗನ್ನಾ । ಯುವತಿ ತಾಯಿ ತಂದೆ

ಕೊಟ್ಟಾ। ರಿವಗೆ ಮೆಚ್ಚಿ ನಿನ್ನಾ । ನವಯುವ್ವನೆನಿನ್ನಾಡಾಲು । ನಾಲಿಗಿಲ್ಲಾ ವಮ್ಮಾ । ನವನೀತತಿಂಬೋ ಬಾಯಿನೋಯಾಲರಿಯಾದವ್ಮಾ ॥ ॥ ೫ ॥ ಹಗೆಯಾನೆನೆ ಹಗಲುಯಿರಳು ಹೋಗಲಡದಿರೆ । ಮುಗುಧೆ ಯಂತೆ ಮೌನದವನಾ ಮನಸನಾದರನೋಡೆ । ತಗೆಬಗೆಯುಮಾಡೆ ತಾತ್ಸಾರವಾಗೋದಲ್ಲೆ । ಸುಗುಣಕೃಷ್ಣಾನೊಲಿಸಿಕೊಂಬೊ ಸೊಗಸಾ ದೇನ ಬಲ್ಲೆ ॥ ೬ ॥ ಹರಿವಾಣದೊಳಗಿನಾ ತುಪ್ಪಾ ಹರಿದುಹೋಗ ದವ್ಮಾ । ಸರ್ವಕಾಲ ರುಕ್ಮಿಣಿಗೆ ಸಮವಾಗೀರದವ್ಮಾ ॥ ಸುರತರು ವಿನಾ ಸುಚ್ಛಾಯಾವು ತಿರುಗಾದಿಹಾದೆನೇ । ಮುರಹರ ಗೋಪಾಲ ನಿನ್ನಾ ನೆರದು ಮುದ್ದಿಸ್ಯಾನೆ ॥ ೭ ॥ ಶ್ರೀಃ ॥

## ಸೀಸಪದ್ಯ.

ಇಂತು ನೀ ಒರದೊರದು ಹೇಳಿದರೆ ಎನ್ನ ಮನದ ಸಂತಾಪ ಬಿಡದಲ್ಲೆ ಸರೋಜಮುಖಿಯೆ । ಕಾಂತಯೆನ್ನಯ ಸರಿಸಮಾನದ ಗರತಿಯರೊಳು ಏಕಾಂತಮಾಡಿದನಲ್ಲೆ ಕೇಳೆ ಸಖಿಯೆ ॥ ಸಂತೋಷವಡದು ಸಾಮ್ರಾ ಜ್ಯಪದದೊಳಗೆನ್ನ ಅಂತರಂಗದ ತಾಪ ಅರಿಯದಾದ । ಇಂತಿನಾನು ಇದ್ದುಫಲವೇನು ಶ್ರೀಲಕ್ಷ್ಮೀಕಾಂತಗಣ್ಣಿಲಿ ನೋಡ ಮಾತನಾಡಾ ॥ ೧ ॥ ಅವನ ನೋಡದ ಕಣ್ಣುಗಳಿಗೆ ಅಲರುಹವೆಂಬ ಚಲುವ ಸಾಮ್ಯಾಗ ಳ್ಯಾಕೆ ಬಾಹುಗಳಿಗೆ । ಅವನ ತೆಕ್ಕೆಯೊಳಿಟ್ಟು ಬಿಗಿಯುಪ್ಪದಿರೆ ಸ್ವರ್ಣ ಲತೆಗಳೆಂಬವುಪಮೆ ಸಲ್ವದೇನೆ ॥ ಅವನ ಸಂತೋಷದಲಿ ಆಲಿಂಗಿಸದ ಸ್ತನ । ದ್ವಯಕೆ ವೃತ್ತೇಭಗಜಮಸ್ತಕೆಂಧು । ಅವನ ಚುಂಬಿಸದ ಅಧ ರಕ್ಕೆಮಾಂದಳಿರೆಂದು । ಅನುವಿಲಿಹುದೆ ಲೇಸು ಅಂಬುಜಾಕ್ಷಿ ॥ ೨ ॥ ಬೆನ್ನಿ ನಲಿ ಬಿದ್ದ ನಿಡುಗುರುಳು ಕಟ್ಟದಲಾದೆ । ಎನ್ನ ಮನದ ವೈಕ್ಲಬ್ಯ ನೋಡೆ । ಅನ್ನೋದಕುತ್ತಾರಕೊಂಬೊದಲ್ಲದೆ ನಿಂಬೆ । ಪಣ್ಣ ಪೋಲ್ವ ಡೆತನವು ಕಂದಿತಲ್ಲೆ ॥ ನಿನ್ನಾಣೆ ನಿಟ್ಟುಸುರಿನ್ಹೊಯಿಲಿನಲಿ ತೊಂಡೆಯಾ । ಪಣ್ಣಾಧರ ಕಂದಿ ರಸವಾರಿತಲ್ಲೆ ಎನ್ನ ಮನೋಹರನಾದ ಯದುಕು ಲೋತ್ತಮ ಬಾರ । ಇನ್ಯಾಗೆ ಜೀವಿಸಲೆ ಇಂದುವದನೆ ॥ ೩ ॥ ಹಸರು

ಜರತಾರದ ಮುಂಡಾಸ ಶಿರಿವಿಟ್ಟು । ಹೊಸ ಜಾತಿಮುತ್ತು ಕುಂಡಲ ಗಳಿಟ್ಟು । ಹಸನಾದ ಶಾಲುಶಲ್ಯದ ಕವಚವತೊಟ್ಟು । ಕುಸುಮಕೇಸರದ ಜವ್ವಾದಿಗಳಬೊಟ್ಟು । ದಶಸಹಸ್ರ ಜತೆವಜ್ರದಗುಂಡು ಕಂಠದೊಳಿಟ್ಟು । ದೆಸೆದೀಪ್ಯವಾದ ಪದಕುರದಲಿಟ್ಟು । ನೆಸಲೊಳಗೆ ಕಸ್ತೂರಿಯನಿಟ್ಟು ವೀಳ್ಯವ ಮೆಲುತ । ನಸುನಗುವ ಕೃಷ್ಣನಾ ನಾನೆಂದು ಕಾಂಬೆ ॥ ॥ ೪ ॥ ಕುರುಳುಗೂದಲು ಕರ್ಣಯುಗದಲ್ಲಿ ರಾಜಿಸುವ । ಸ್ಮರನಸಿಂಗಡಿಗಿಂದಧಿಕಪೂರ್ಬು । ಅರಳಿದಾ ನೈದಿಲೆಯ ನಿಟ್ಟೆಸಳಗಣ್ಣು ಸಂಪಿಗೆನೆನೆಯಂತೆ ನಾಸಿಕ ಮೆರವಗಲ್ಲಾ । ಮುರಹರನ ಅಧರವಮಾಂದಳಿರಥವ ಮಾಣಿಕದ । ಹರಳಧರ ತೊಂಡೆವಣ್ದಿರವು ಜಾಣೆ । ಬೆರಳಿಂದಮುರಳಿನಾದಿಸುವ ಮನಸಿಜಪಿತನ । ಕರೆಸಿಂದು ಕಣ್ದಣಿಯೆ ಕಾಂಬೆನಮ್ಮಾ ॥ ೫ ॥

ರಾಗ ಶಂಕರಾಭರಣ, ಆದಿತಾಳ.

ನೀಲೋತ್ಪಲಬಾಣ ನಟ್ಟಿತೆನ್ನಾ ಎದೆಗೆ । ಕೀಳುವರೊಬ್ಬರ ಕಾಣೆ । ಲೋಲಾಪ್ತನಾದ ಶ್ರೀಕೃಷ್ಣಗೆನ್ನಯ ತಾಪಾ । ಲೋಲಾಕ್ಷಿ ನೀಹೋಗಿ ತಿಳಿಸೇ ॥ ಪಲ್ಲ ॥ ಶುಕನೆಂಬ ವಾಜಿಯನೇರಿ ಸಕ್ಕರೆಬಿಲ್ಲಾ । ಶಕುತಿಂದ ಕರ್ಣಕ್ಕೆ ಸೆಳದಾ । ಪಿಕನಾದ ಮರಿದುಂಬಿಗಳ ಝೇಂಕಾರಕ್ಕೆ ಭ್ರಾ । ಮಕಳಾದೆ ಅರಸಂಚೆಗಮನೆ ॥ ೧ ॥ ಮೆರೆವ ವಸಂತನ ಧುರವ ಕಂಡೀದೇಹ । ತರಹರಿಸದೆ ತರಳಾಕ್ಷಿ ಸುರಿವ ಕಿಚ್ಚಿದು ಚಂದ್ರಿಕೆಯಲ್ಲ ನಿನ್ನಾಣೆ । ಸುರವಂದ್ಯನ ಕರತಾರೆ ॥ ೨ ॥ ಎಡದಕೈಯ್ಯಲ್ಲಿ ಸೋಲ್ಮುಡಿಯುವಿಡಿದು ತನ್ನಾ ಬಲಗಯ್ಯ ಚುಬುಕಾಗ್ರವಿಡಿದು । ತೊಡೆಯುಮೇಲಿಟ್ಟು ಮುದ್ದಿಸದಿರೆ ಯಿಂದಿನ । ಪಡದಾವಪರಿಯು ಗೆಲುವೆನೆ ॥ ೩ ॥ ಸುಳಿಗುರುಳು ತಿದ್ದುತ ಸಮಕುಚಗಳಲಿ ಚಳ್ಳುಗುರು ಮೂರ್ವೊನೆ ನಾಟಿಸುತಾ । ನಳಿನಾಕ್ಷಿ ಬಾರೆಂದು ಬಿಗಿಯುಪ್ಪದಿರೆ ಈ । ಮುಳಿವುದಿರುವ ಬಗೆಹ್ಯಾಗೆ ॥ ೪ ॥ ಪನ್ನೀರ ಚಲ್ಲಬೇಡಿರೆ ದೇಹಕೆ ಪಾಪಿ । ಹೆಣ್ಣುಗಳಿರ ತಾಳುವದೆ ಯೆಣ್ಣೆ ಕಾದ್ದಂಚಿಗೆ ಎರಡಂತೆ ಮತ್ತಿಷ್ಟು । ವುನ್ನತವಹುದುವಿರಹಾಗ್ನಿ ॥ ೫ ॥ ಸೃಷ್ಟಿಯೊಳಗೆ ಹೆಂಗಳೆಯರ ಜನ್ಮವು ।

ಪುಟ್ಟಿಸಿದನ್ಯಾಕೊ ಬ್ರಹ್ಮಾ । ಮುಟ್ಟಲೆನ್ನ ಉಸುರು ಮನ್ಮಥ ರಿಪು ಬೇಗ । ಕುಟ್ಟಿಬಿಟ್ಟಾನೊಂದು ತಲೆಯಾ ॥ ೬ ॥ ಉರ್ವಿಯೊಳಗೆ ನಾನೋತಫಲಂಗಳ । ಪೂರ್ವಜನ್ಮ ಸುಕೃತಗಳೂ ॥ ದೂರ್ವದಳಸ ದ್ರೂಪಾಂಗ ಕೃಷ್ಣನ ಅಗ । ಲೋರ್ವಳಿದ್ದರೆ ಅಸಾರ್ಥಕವೆ ॥ ೭ ॥ ದ್ರುಪ ದನಂದನೆಯಳ ಎಳತಂದು ಸಭೆಯಲ್ಲಿ । ಅಪಹಾಸ್ಯವ ಮಾಡುತಿರಲೂ ॥ ಕೃಪೆಯಿಂದಲಭಿಮಾನಿಮಾನ ಕಾಯಿದ ಗೋಪಾ । ಲಕ ಯಾಕೆ ಎನ್ನಮರೆ ದನೆ ॥ ೮ ॥ ಸೀತೆಗಾಗಿ ಸೇತುವೆಗಟ್ಟಿ ಅಪರಿಮಿತ । ಕೋತಿಗಳನೆ ಕೂಡಿ ಕೊಂಡು । ವಾತಾಹತಾ ರಾಕ್ಷಸರ ಮಡುಹಿದ ರಘುನಾಥನನ್ಯಾಕಗಲಿ ದನೆ ॥ ೯ ॥ ಶಿಲೆಯಾಗಿ ಬಿದ್ದಳ ತುಳಿಮುಪಾದಂಗಳಿಂದ । ವಲಿದು ಹೆಂಗ ಳನು ಮಾಡಿದನೆ । ಬಲುವಿಂದ ಚಂಚೆಯನಾಳದಂಥ ಗೊಲ್ಲರ । ಕುಲ ದೀಪ ನನ್ನ ಮರದನೆ ॥ ೧೦ ॥ ಮಾತೆಯ ಕೊಂದವಗ್ಯಾತರ ನ್ಯಾಯವೆ ದಾತಬಲಿಯ ಮೆಟ್ಟಿ ತುಳಿದಾ । ಪೂತನಿಮೊಲೆಯುಂಡು ಘಾತಮಾ ಡಿದ ಮಂಕು । ದೂತಿನಾನವ ಗೇನೆಣಿಯೆ ॥ ೧೧ ॥ ಕುಬ್ಜೆಯ ಕೋಮ ಲಾಂಗಿಯ ಮಾಡಿದನು ಕರಿ । ಸ್ವಬ್ಜಲೋಚನೆಯ ಕೂಡಿದನೆ । ಅಂಬುಜ ದಳಾಕ್ಷಿ ರುಕ್ಮಿಣಿಯಕೂಡಿ ಎನ್ನ ಶಬ್ದವನ್ಯಾಕೆ ಮರೆದನೆ ॥ ೧೨ ॥ ಕಾಮೋತ್ಕಟ ವೇದನೆಬ್ಯಾರೆ ಸವತಿಯೋಳ್ । ಪ್ರೇಮಮಾಡುವ ದುಃಖ ಬೇರೆ । ವಾಮಲೋಚನೆಯರು ತಲೆಮುಂಡೆ ಕುಕ್ಕುವ । ಈಮಹಾ ದುಃಖ ತಾ ಬೇರೆ ॥ ೧೩ ॥ ಎಂತು ಸೈರಿಸಲಮ್ಮಾ ಕಾಂತನಿಲ್ಲದ ರಾತ್ರಿ । ನಿಂತಿದೆ ಯುಗಕೋಟಿಯಂತೆ । ಕಂತುಜನಕ ಗೋಪಾಲನ ಕರ ತಂದು । ಇಂತು ನೀ ವಡಗೂಡಿಸಮ್ಮಾ ॥ ೧೪ ॥ ಶ್ರೀಃ ॥

ಸೀಸಪದ್ಯ.

ಎನ್ನ ಪೋಲುವ ಪಾಪಿ । ಹೆಣ್ಣು ಈ ಇಳೆಯೊಳಗೆ । ಇನ್ನೇಳು ಜನ್ಮಕ್ಕೆ ಜನಿಸಬೇಡ । ಇನ್ನು ಈತನುವು ಜನಿ । ಸುವದಕಿಂತ ಜಡವೃಕ್ಷ । ವನ್ನಾಗಿ ಅಡವಿಯೊಳಗಿಹದೆ ಲೇಸು ॥ ಮುನ್ನಾರ ವಗತನವಸಳದಿರ್ದೆನಕಟಕಟಾ । ಎನ್ನ ಪ್ರಾಣಪತಿಯೆನಗೆ ಹಗೆಯಾದ । ಮುನ್ನ ನಾ ಮಾಡಿದ್ದು ನಾನುಂ ಡುತೀರಿಸದೆ । ಅನ್ಯರಿಗೆ ಬಾಯಿದೆರದರೇನೂ ॥ ೧ ॥ ಅರಿಗುಸುರಲಿ

ಅಲ್ಪರಿಯಲಿನ್ನಾಂಗೆ । ಆರಹಂಗಿಗಳಾಗಲಾರವಮರಿಹೊಗಲಿ । ಆರಿಗೇ ನಾಸು ದೈನ್ಯವಬಡಲಿ ಅಕಟಾ ನಾ। ನಾರ ಕೈಬಾಯಿಗೆ ಬಂದಬಲಿ ಯಲ್ಲ ॥ ಆರಲ್ಲಿ ಪುಟ್ಟಿದೆ ಆರ ಕೈವಿಡಿದೆ ಗ್ರಹ। ಚಾರಬಾಹದನು ನಾನರಿತದಿಲ್ಲ। ಆರನಾಪ್ತರಕಾಣೆ ಆರಣ್ಯವಾಯಿತಿದು । ಮಾರನುಪಟಳವ ನಾ ತಾಳಲಾರೆ ॥ ೨ ॥ ಎಸಗುವ ಸುಗಂಧಾಂಗಿ ಯೆನ್ನ ನೀ ಮೆಚ್ಚದಿರೆ। ಮಸಗುವ ಕುಗಂಧಾಂಗಮತ್ಸ್ಯನಾಗೂ । ನಸುನಲಿವ ಬಾಹುಲತೆಯು ಳನಪ್ಪದಿರೆ ಕಾಂತ। ಪಸರಿಸುವ ಬಾಹುಗಳ ಕೂರ್ಮನಾಗು ॥ ಹಸನಾದ ಅಮೃತ ತುಂಬಿದ ಅಧರಸೊಗಸದಿರೆ। ಹಸಿವುಣ್ಣಗಳತಿಂಬ ವರಹನಾಗೂ। ಶಶಿಮುಖಿ ಸುದತಿಯುಳ ಶುಕಮಾತನೊಲ್ಲದಿರೆ। ಮಸದು ಆರ್ಭಟಿಸುವ ಸಿಂಹನಾಗೂ ॥ ೩ ॥ ಮಾರಕೇಳಿಯೊಳೆನ್ನ ಕೂಡದಿದ್ದರೆ ಬ್ರಹ್ಮ। ಚಾರಿಯಾಶ್ರಮ ನಿನಗೆ ತಪ್ಪಬೇಡ । ಭಾರಿದ್ದ ವಿರಹಾಗ್ನಿಯಲ್ಲಿ ಹೊರಳುವೆನು। ಸಾರ್ವಗಾಲದಿ ಆನಲಾಂತರ್ಯಾಮಿಯಾಗೂ ॥ ಸೇರದಲೆ ನೀಯೆನ್ನ ನಗೆಗೇಡುಮಾಡಿದ್ಯೋ । ನಾರಿ ವಿರಹದಲಿ ವನವನವ ತಿರುಗೂ।ಪೋರಾಟಮಾಡಿದ್ಯಲ್ಲವೊ ನೀನು ಎನ್ನಕೂಡೆ।ಸೇರಿ ಗೋಕುಲದಿ ದನಗಾವಿಯಾಗೂ ॥ ೪ ॥ ನಗೆಗೇಡುಮಾಡಿದ್ಯಲ್ಲವೊ ನೀನು ಎನ್ನಕೂಡ। ಜಗದೊಳಗೆ ನೀ ದಿಗಂಬರನಾಗೂ। ಹಗೆಯುಳನೆಮಾಡ್ಯೆನ್ನ ತಗಬಗೆಯು ಗೊಳಿಸಿದ್ಯೋ । ಹಗೆಯರ್ಥೆಚ್ಚುವರು ನೀ ಹಯುವನೇರೂ । ನಗಧರನೆ ನಾನಿನಗೆ ಭಾರವಾಗಿದ್ದೆನೇ। ಜಗದೊಳಗೆನ್ನ ಬ್ರಹ್ಮ ಪುಟ್ಟಿಸಿದನ್ಯಾಕೊ। ಮುಗುಧೆ ಉಸುರವಗೆ ಮುಟ್ಟಲೀಹದೆ ಪಾಪಿ। ನಗಜಾತೆಪತಿಯುವನ ತಲೆಕುಟ್ಟಲವ್ವಾ ॥ ೫ ॥ ಅವನ ಪಟ್ಟದರಾಣಿ ಅವನಿಯೊಳುಶಿರಿತಿನಲಿ। ಅವನ ಸೋದರಿ ಶಿವನ ಸೇರಲಿನ್ನೂ। ಅವನ ಒಡಹುಟ್ಟಿದವ ಅಗ್ನಿವಶವಾಗಲೀ । ಅವನ ಸುತನಿದ್ದಲ್ಲಿ ಕದನ ಬರಲಿ। ಅವನ ಪೂಜಿಸಬೇಡ ಅಖಿಳಲೋಕದ ಜನರು । ಅವನ ಪಟ್ಟಕೆ ಮುಂದೆ ಹನುಮ ಬರಲಿ । ಅವನೆನ್ನ ಪುಟ್ಟಿಸಿದನೆವವೇನೆ ಅಮ್ಮಯ್ಯ । ನವಮಲ್ಲಿಕಾ ಶರಕೆ ನಾ. ತಾಳಲಾರೆ ॥ ೬ ॥ ನೆರದಂಡಿಲಿವಮಾರ ಉರಿದು ಬೀಳಲೊ ನೀನೂ ॥ ಪರರ ಪಂಜರದೊಳಿರಲಿ ಕೋಗಿಲೆಗಳೂ । ಸ್ಮರನ ಕಬ್ಬಿನ

ಬಿಲ್ಲು ಗಾಣದೊಳು ಬೀಳಲೀ । ಸರಳುಮದ್ದಾನೆಗರುಮ್ಮುರಿಯಲಮ್ಮ
ಧುರವಸಂತನು ಬೇಗ ಬರಲಾಗಹೋಗಲಿ । ಅರಗಿಳಿಯು ಪಂಜರದೊ
ಳಾಗಲಮ್ಮಾ । ಇರುಳಾಳ್ವನಿಗೆ ರಾಹು ತೊಡಕಲಿ ಈಕ್ಷಣದಿ । ಮರಿ
ದುಂಬಿ ಕಮಲದೊಳು ಮುಚ್ಚಲಮ್ಮಾ ॥ ೭ ॥ ಕಾಮಿನೀ ವ್ಯರ್ಥವಾ
ಯಿತು ಎನ್ನ ಯೌವನವು । ಕಾನನಕೆ ಕಾದ ಬೆಳದಿಂಗಳಂತೆ । ಆಮಾತೆ
ಎನ್ನನೇನೆಂದು ಪೆತ್ತಳೊ ವೃಥಾ । ಭೂಮಿಯೊಳು ಅಜಗಳಸ್ತನಯು
ಗ್ಮದಂತೆ ॥ ಕಂಡುಕಂಡೆನ್ನ ಕೊಟ್ಟರು ತಾಯಿತಂದೆಗಳು । ಚಂಡಿಕರ್ಕ
ಶಿಯಾದ ಸವತಿಮೇಲೆ । ಕೊಂಡರೆನ್ನೊಗತನವ ಕಠಿನೋಕ್ತಿಗಳು
ನಾನು । ಕಂಡಕಂಡವರಿಗಿನ್ನಾಡಲ್ಯಾಕೆ ॥ ೮ ॥ ಇರುವಂತಿಗೆ ಹಾರ
ಕೊರಳಿಗ್ಹಾಕಿಕೊಂಡು । ಉರಲುಬೀಳಲಿ ನಾನು ಸರಸಿಜಾಕ್ಷಿ । ತುರುಬಿ
ನೊಳಗಿದ್ದ ಕೇದಗಿಯ ತೆಗೆದುಕೊಂಡು । ಉರದಮೇಲಿರಿದುಕೊಳಲಿ
ಇಂದುವದನೆ । ಪನ್ನೀರಕೊಳದೊಳು ಧುಮುಕಲಿ ನಾ ಪಾಪಿ । ಹೆಣ್ಣುಗ
ಳಿರಾ ಎನ್ನ ಬಿಡಿಬಿಡಿರೆನುತ । ಕಣ್ಣೀರಸೋನೆಯುಲಿ । ಕಾಮುಕಲೆಶಾಸ್ತ್ರ
ಸಂಪನ್ನೆಗೈದಳು ಮೂರ್ಛೆ ಕಾಮಗಿದು ಚರ್ಚೆ ॥ ೯ ॥ ಶ್ರೀಃ ॥

ರಾಗ ರೇಗುಪ್ತಿ, ಆದಿತಾಳ.

ಚರ್ಚೆಚರ್ಚೆಚರ್ಚೆ ಮದನಗಿದು । ಚರ್ಚೆಚರ್ಚೆಚರ್ಚೆ ॥ ಪಲ್ಲ ॥
ಋಷಿಕುಲವನೆಲ್ಲ ಓಡಿಸಿದೆ । ಭಸಿತ ರುದ್ರಾಕ್ಷಿಗಳ ಬಿಡಿಸಿದೆ ಈ ।
ಶಶಿಧರರುದ್ರನು ಪಾರ್ವತಿಯಾ ಕೂಡಿದನೆಂಬ ॥ ೧ ॥ ಇಂದ್ರನನ್ನ
ಬಲೆಯೊಳಗೆ ಈ । ಚಂದ್ರ ನನ್ನಂಬಿನಕೆಳಗೆ । ಜಲಂಧ್ರನ್ನ ಕೆಡಿ
ಸಿದ ಜಗಜಟ್ಟಿ ನಾನೆಂಬೆ ॥ ೨ ॥ ಛಲಬಿರಿದುಗಳ ನಡಿಸುವೆ । ಬಲಿ
ಗಳ ಕೂಡವಗಡಿಸುವೆ ಈ । ಜಲನಿಧಿ ಜಾತಿಗೆ ವ್ಯಾಕುಲವಾಮಾಡಿದೆ
ನೆಂಬ ॥ ೩ ॥ ಶ್ರೀಃ ॥

ರಾಗ ಯರಕಲಕಾಂಬೋಧಿ, ತ್ರಿಪುಟತಾಳ.

ಕಾಮನಾಥಾಳಿ ಸೋಕೀತೂ । ಹೇಮಲತಾಂಗಿಗೆ । ಕಾಮಿನಿಯಾರೆ
ಲ್ಲಾರು । ಕವಿದು ಬನ್ನಿರೆಯಮ್ಮಾ ॥ ಪಲ್ಲ ॥ ಹಿರಿಯರ ಕರಿಯಾರೆ ಹೆತ್ತ

ವರಿಗ್ಹೇಳಿರೆ। ಶೌರಿಯು ಬಳಿಗೊಬ್ಬ। ರ್ಹರಿದುಹೋಗಿರೆಯುವ್ವಾ। ಹಿರಿಯು ನಿಂಬೆಯುತನ್ನಿ। ಹಣೆಗೆ ಕಪ್ಪಿಡಬನ್ನಿ । ತರಳೆ ನಮಗೆ ಕಲ್ಪ। ತರುವೆ ಚಿಂತಾಮಣಿ ॥ ೧ ॥ ಪಚ್ಚೆಕರ್ಪೂರವ । ಹಚ್ಚಿರೆಪಾದಕ್ಕೆ । ಅಚ್ಚಶ್ರೀ ಗಂಧವ। ಅಂಗಕ್ಕೆ ವರಸಿರೆ ॥ ಹೊಚ್ಚಿರೆಮಲ್ಲಿಗೆ। ಕೊಚ್ಚಿರೆ ಪನ್ನೀರೂ। ಮಚ್ಚಗಂಗಳೆ ನಮ। ಗ್ಹೆಚ್ಚಿನ ಸುರಧೇನು ॥ ೨ ॥ ಬೀಸಣಿಗೆಯ ತಂದು। ಬೀಸಿರಂಜೆ ದುಪ್ಪಳ। ಹಾಸಿಕೆಯಲ್ಲಿ ಮಲ। ಗಿಸಿರೆ ಸುದತಿಯರು । ವಾಸುಕಿಶಯನ ಶ್ರೀ । ಕೃಷ್ಣನನೆಲ್ಲರು ಕೂಡಿ । ಈಶಿರೋಮಣಿಗೆ ತಂದಿತ್ತು ಉಳುಹಿಕೊಂಬಾ ॥ ೩ ॥ ಕಳೆಗಳಿದ್ದಲ್ಲಿ ಕೈ। ಯಿಟ್ಟು ನಾಡಿಯ ನೋಡಿ। ಗುಳಿಗೆ ಕಾಚಿನಮಾತ್ರೆ। ಗುಟುಕು ತಾಂಬೂಲರಸ। ದೊಳುಚೆ ರಕೆಯ ಮಾಡಿ। ನಳಿನಾಕ್ಷಬಾಯಾರ। ಕೆಳದಿಗೆ ಕುಡಿಸಾಲು। ಅಳಿದು ಹೋಹದು ತಾಪ ॥ ೪ ॥ ಜೀವಕ್ಕೆ ಭಯವಿಲ್ಲಾ। ಭಾವಜನಯ್ಯನು । ಶೀವಿದೆಳೆನಗೆಯಲ್ಲಿ। ಭಾವೆಯ ಬಿಗಿದಪ್ಪಿ ॥ ಆವೇಳೆಯ ಬೆವರೂ। ಆರೋಗ್ಯ ಸ್ನಾನವು। ಪಾನಧರಾಮೃತ। ಪರಮ ಪಥ್ಯವೀಕೆಗೆ ॥ ೫ ॥

## ವಚನ.

ಹೇಳಲಬುದಪ್ಪಿದರಿಂಗೆ। ಹಾದಿಯ ತೋರದಂತೆ। ನಳಿನಾಕ್ಷ ಕೃಷ್ಣನ್ನ ವಲಿವುತನ್ನ ಸಂಸ್ಕಾರ । ಬಲದಿಂದ ಕನಸಿನೊಳು ಕಂಡು ಬಿಗಿದಪ್ಪಿ। ನಲವಿಂದ ಕೂಡ್ಯಂಗಸಂಗದೊಳು ಸುಖಬಡುತ। ಲಲನೆ ಕಂಗಳ ತೆರಿ ಯುಳು ಇದು ಸ್ವಪ್ನವಹುದೆಂದು। ತಳಿತಪವಳದ ಲತೆಯು। ನೆಲಕೆ ಹಬ್ಬಿದ ತೆರದಿ। ಜಲಜಾಕ್ಷಿ ಪಾಣಿಪಲ್ಲವನು। ಗಲ್ಲದಡಿಯಿಟ್ಟು ಎಡಮುಗ್ಗು ಲಿಕ್ಕಿರಲು। ಕಲಕಲ ಧ್ವನಿಮಾಡಿ। ಕಲಹಂಸಗಮನೆಯರು । ಬಲುಹಿಂದಲೆಚ್ಚರಿಸೆ ಕರತಳದ ಮಾಣಿಕವು। ಕಳೆದು ಕಂಗೆಡುವಂತೆ। ಲಲಿತಾಂಗಿ ಮೂರ್ಛೆ। ತಿಳಿ ದೆದ್ದುಕುಳಿತಳು ಶ್ರೀಕೃಷ್ಣಾ। ಸಲಹೆಂದು ಸ್ವಪ್ನಸಂತೋಷಕರವೆಂದೂ ॥ ೧ ॥

## ರಾಗ ರೇಗುಪ್ತಿ, ತ್ರಿಪುಟತಾಳ.

ಯಾತಕೆನ್ನನು ಎಬ್ಬಿಸಿ। ತೆಕ್ಕೆಯೊಳಿದ್ದ । ನಾಥನಗಲಿಸಿದಿರ್ಯಾ। ಯಾತಕೆನ್ನನು ಎಬ್ಬಿಸಿದಿರೆಲೆಲೆ ಪಾಪಿ । ಜಾತಿಗಳಿರ ಪ್ರಾಣ ಸಾಥೀಗ

ಬಂದಿದ್ದ ॥ ಪಲ್ಲ ॥ ಎಂಥ ಪುಣ್ಯದ ಕನಸೆ । ನಿಮಿಷವೆನ್ನಾ । ಸಂಥವೀಡೇರಿ ಸಿತೆ ॥ ಅಂತರಂಗದ ತಾಪ । ಅತಿಗಳದೆನ್ನ ಪ್ರಾಣ । ಕಾಂತ ಮುಂಗುರುಳು ನೇವರಿಸಿ ಮುದ್ದಿಸುತಿರೆ ॥ ೧ ॥ ಗಲ್ಲವ ಪಿಡಿದಿದ್ದಾನೆ । ಎನ್ನಯ ಹೆಗ । ಲಲ್ಲಿ ಕೈಹಾಕಿದ್ದಾನೆ. ॥ ನಲ್ಲೆಬಾರೆಂದಪ್ಪಿ । ಪಲ್ಲಿಲಧರವತ್ತಿ । ಬಲ್ಮೊಲೆ ಯಲಿ ಉಗು । ರಿಡುವ ಸಮಯದಲ್ಲಿ ॥ ೨ ॥ ಸರಸಮಾತುಗಳಾಡುತಾ । ಮದನನಾ । ತುರದಿ ಮೊಗವ ನೋಡುತಾ ॥ ಭರದಿ ಕಳೆಗಳನ್ನು । ಅರಿದು ಅಧರಸುಧೆ । ಸುರಿವುತ ಗೋಪಾಲ । ನೆರದು ಸಂತೈಸುತಿರೆ ॥ ೩ ॥

ರಾಗ ಪಾಡಿ, ಕುರಗ ಝಂಪೆತಾಳ.

ಸುಮ್ಮನೆ ದುಃಖಿಸಬೇಡವಮ್ಮಾ । ಬೊಮ್ಮ ಫಣೆಯಲಿ ಬರೆದ ಬರಹ ತಪ್ಪದು ತಾಯಿಯಾ ॥ ಪಲ್ಲ ॥ ಪಕ್ಷಿಗಳು ಮೊದಲಾಗಿ । ಇಚ್ಛೆಬಂದಲ್ಲಿ ಬಲು । ವೃಕ್ಷಗಳ ಫಲಸಲಿಸಿ ಉಲ್ಲಾಸವೆರಸೀ ॥ ಸ್ವಕ್ಷೇತ್ರವನು ಸೇರಿ । ಸಂಜೆಯಲಿ ಸತಿಪತಿಗ । ಳುತ್ಸಹದಿಹವದಕೆಂ । ತತ್ತ ನಿನ್ನಯಬದಕು ॥ ೧ ॥ ಎರಳೆಹಿಂಡುಗಳು ಗಂ । ಡೆರಳೆಗಳ ಕೂಡಿ ಹಗ । ಲಿರಳು ಸಲ್ಲಾಪಸಂ ಭೋಗದೊಳಗಿಹವೆ ॥ ಮರುಳೆ ಸತ್ರಾಜಿತ । ತರಳೆ ವಿಧಿಲಿಖಿತಬಿ । ದ್ದೊರಳೆ ಯೆರಡಾಗುವಡೆ ಯಾತಕೆ ಬರಿದೆನೀ ॥ ೨ ॥ ಒರಲೆ ಹುತ್ತಿಗೆ ಸರ್ಪ । ವರನಾದಬಗೆ ಹೊಟ್ಟಿ । ತೆರೆದು ಪಡದಿಟ್ಟ ಭೀಷ್ಮಕ ಕುವರಿಯಾ ॥ ಹರಲೆ ನಿನ್ನ ಬದುಕಾಯಿತು । ಪಡದ ಪೊಟ್ಟೆಪುಣ್ಯ । ಸುರಧೇನು ಬರ ಹಲ್ಲ । ಗೋಪಾಲನೆ ಬಲ್ಲ ॥ ೩ ॥ ಶ್ರೀಃ ॥

ಸೀಸಪದ್ಯ.

ಉತ್ತಮರೆ ನೀವು ಮೇಣಾದ ಶೂಲವನೆ । ಸುತ್ತಿಸುವಿರಲಿ ಸುಖದ ಸುಗ್ಗಿ ನಿಮಗೆ । ನೆತ್ತಿನೋಯಲು ಕಾಲಿಗೌಷಧವ ಮಾಡುವಿರಿ । ಹೆತ್ತ ವರಿರಲು ಬೇವುಹೆರರಗಿಕ್ಕುವಿರಿ ॥ ಹತ್ತೊಟ್ಟೆಶೂಲಿಯಲಿ ಹೊರಳುವಿರಿ ಗಜಿವಾನ । ಬಿತ್ತಿಸಿದೆವೆಂದು ಹೇಳುವಿರಿ ನೀವು । ಕತ್ತೆಕೈಮಾಡಿ ಡೊಂಬಗೆಯಲ್ಲೆ ಬಡತನವು । ಶಸ್ತ್ರದಲಿ ಸೊನ್ನೆ ಹುಲಿಯಂತೆ ಬಂಟಾ ॥ ॥ ೧ ॥ ಗಿಳಿಮಾತಿನಿಂದ ಫಲವೇನೆ ಎಲೆದೂತಿ ನಿ । ನ್ನಳಿತೋಳ್ಗಳು

ನೋಡಿ ಹಿಗ್ಗುವಲ್ಲೆ। ಸುಳಿಗುರುಳಿನಿಂಪುಕರ ಹಲ್ಲಿನಿಂಗಿನ ಮುರವು। ಹಳೆ ಸುದ್ದಿ ಹೇಳಲಿಕೆ ಹೆಬ್ಬುಲಿಯೆ ನೀನು। ತೊಳಲಿ ಬಂದೆಲೆ ಗಾಣದೆತ್ತಿನಂದದಿ ನಿನ್ನ। ನಿಲವು ಚಂಡಿಕೆದೇವಿ ಹೊಳವು ಕಾಣೆ। ವಳಹೊಳ್ಳು ಭೇರಿಯಂತೊದರು ಬಲ್ಲಿಷ್ಟೆ ಕಂ। ಡವರಿಗೆಲ್ಲೆ ಕಾರ್ಯದ್ವೊಯಿಲು ಬಿಟ್ಟೆ ॥ ೨॥

ರಾಗ ಯರಕಲಕಾಂಬೋಧಿ, ಅಟತಾಳ.

ಚಿಕ್ಕಂದು ಮೊದಲು ನಿನ್ನೆತ್ತಿಳುಹಿದೆನೆಂದು। ಅಕ್ಕರದಿಂದೆನ್ನಾ ಹತ್ತಿಲಿಟ್ಟನು ತನ್ನಾ। ಮುಕ್ಕಳ ಸಮಮಾಡೀ ಮಹಿಪತಾ ಸಲಹಿದಾ। ಚಿಕ್ಕತನದಲಿಂದಾ। ಚಿತ್ತಾ ತಿಳಿಯದಾದೆ ॥ ೧॥ ಹೆತ್ತಯ್ಯನ ಮನೆಯಾ। ತೆತ್ತಿಗಳು ನಾನಲ್ಲೆ। ತುತ್ತಿನಾಸೆಗೆ ಬಂದಾ। ತೊತ್ತುತೊಡಿಕೆಯಲ್ಲಾ॥ ಮತ್ತೇನು ಗುಣವುಂಟು। ಹತ್ತಕ್ಕೆ ಕೊಡಲುಂಟು। ಮತ್ಯ್ರಕರಿಸು ನನ್ನಾ। ಸತ್ರಾಜಿತಸಂಪನ್ನ ॥ ೨ ॥ ಮಾಡಬಾರದುಪಾಯ। ಮಾಡಿ ನೋಡಿದೆನಿನ। ಗೀಡಾದವಳಿಗೆ ನಾ। ಝಾಡಿಸ್ಯಾಡಿದೆನಮ್ಮಾ। ಆಡಬಾರದಮಾತ। ನಾಡಲವಧರಿಸಿದೆ। ರೂಢಿಮೆಚ್ಚುವರೆನ್ನಾ। ನಾಡು ಹೆಂಗಳೆಯೆಲ್ಲಾ ॥ ೩ ॥ ಹಿರಿಯಳಾದೆಮ್ಮಾನಿನ। ಗ್ಹೇಳುವರಾದರು। ಪರವೇನೆನಿನಗೆ ಹೆ। ತ್ತವರ ಹೊಂದಿದವರಾ। ಧೊರಿಯತನವೆ ಅಂದ। ಆಡುವಿರಿನಲುವಿಂದ। ತುರುಬಿದ್ದವರುಯತ್ತ। ತಿರುವಿಕೊಂಡರೆ ಚಂದ ॥ ೪ ॥ ಸಾಕಮ್ಮಾಸಂಗನಾ। ಪೋಕಬುದ್ಧ್ಯವಳಲ್ಲ। ಬೇಕಾದವರ ನೀನು। ಬೈದ್ಧು ಊಳಿಗಕೊಳ್ಳೆ। ಸಾಕುವಾರೆನಗುಂಟು। ಸಾಮ್ರಾಜ್ಯಪದವುಂಟು। ನಾಕುದಿವಸನಮ್ಮಾ। ಮನೆಯೊಳಗಿಹೆನಮ್ಮಾ॥ ೫ ॥ ಶ್ರೀಃ ॥

ಸೀಸಪದ್ಯ.

ಉಂಡ ಹುಣ್ಣಿಗೆ ಉಪ್ಪು। ನೊರಸಬೇಡೆಲೆ ಪಾಪಿ। ಹಿರಿಯಳಲ್ಲೇನೆ ಹೆತ್ತಮ್ಮಕೊಟ್ಟ ॥ ಗರುವೆಗಿನ್ನಾಡದಲೆ ಅನ್ಯರಿಗೆ ಆಡಿದರೆ। ಜರೆವರಲ್ಲದೆ ಅವ। ರಂಗೀಕರಿಸುವರೆ। ಸರಿನಿನ್ನ ಬಸುರಿನಲಿ। ಬಂದ ಹೆಂಗಳೆ ನಾನು। ಅರಮರೆಬೇಡವೆ ಅಂಬುಜಾಕ್ಷಿ ॥ ಕರೆಯ ಹೋಗುವ ಬಾರೆ। ಕೂಡಿ ನಾವಿಬ್ಬರು। ಕರಿರಾಜವರದ ಕೃಷ್ಣನ್ನ ಬಳಿಗೆ ॥ ೧ ॥ ಶ್ರೀಃ ॥

ರಾಗ ರೇಗುಪ್ತಿ, ಆದಿತಾಳ.

ಬಾಲೆಯಿಂದುವದನೆ ಕುಟ್ಮಲರದನೆ ನಾವೆಲ್ಲ । ನಂದಕುವರನ ಕರೆದು ತಾಹನಂತೆ । ತಾಯಂತೆ ಸಲಹಿದನಾಳ್ದನ ಬಾಧೆಗೆ । ತಾಳದೆನ್ನ ದೇಹ ಆಯತಾಕ್ಷಿ ಉ । ಪಾಯವೇನು ಲಜ್ಜಾಯತಳಾದರೆ । ಕಾಯವುಳಿಯೆ ಕೋಟಿಕಾರ್ಯ ಕಾಣಬಹುದು ॥ ಪಲ್ಲ ॥ ಕಯ್ಯುವಿಡಿದ ಕಾವ । ನಯ್ಯನ ಕರತರ । ಲಯ್ಯ ಕೊರತೆ ಅವನೊಳಗ್ಯಾಕೆದ್ವೈರ್ಥ । ಸಯ್ಯ ಕೋಪದಿ ಪಂಥ । ಜ್ಮುಖಳಾಗಿ ನಾ ಬಲ । ಗಯ್ಯ ಯೆನ್ನತ್ತ ಮಾಡಲು । ನಸುನಗುತಾ ॥ ಮಯ್ಯದಡವಿ ಮು । ದ್ದಿಸಿ ಉಪಚರಿಸುವ । ವಯ್ಯಾಳಿಗೆನಗೇ । ತರ ಭೇದವವ್ವಾ । ಗಯ್ಯಾಳಿ ರುಕ್ಮಿಣಿ । ಗರ್ವಮುರಿದು ಮನ । ನೋಯಿಸಿ ಮರ್ಮಗ । ಳಾಡಿ ಮಾಧವನ್ನ । ಕಯ್ಯುಪಿಡಿದು ಕರ । ತಂದರೆ ನೀ ನೋಡಿ । ಸಯ್ಯೆಸಯ್ಯೆಸೈಸೈ ಯೆಂಬಂತೆ ॥ ೧ ॥ ಸೋಡಿದಂತೆ ಕಾರ್ಯ । ನಯದಿಂದಲಾದರೆ । ಆಡೆನೊಬ್ಬರ ಕೂಡ । ಜಗಳವೆ ಬೇಡಾ ॥ ರೂಢಿ ಮೆಚ್ಚಲು ಮಾ । ತಾಡುವೆ ಸವತಿ ಮುಂ । ಚಾಡಿದರನ್ನ ತಾಳುವೆ ನಾನೊಂದೆನ್ನಾ । ನೋಡವ್ವವಾಗ್ದೇವಿ । ಬಲದಲ್ಲಿ ಬಿಡಿಮುತ್ತು । ಜೋಡಿಸಿದಂತೆ ಎನ್ನ । ವಚನವು ಕಾಂತೆ ॥ ಆಡುತಾಡುತಲೆ ಅಂಬುಧಿಶಯನನ । ಕೂಡಿ ಕೊಂಡು ಮಂದಿರಕ್ಕೈತಂದರೆ । ಈಡಿಲ್ಲೆಂದೆನ್ನಾ ಯೆದುರಿಗೆ ನೀನಿಂದು । ನೋಡಿ ನೋಡಿ ನೋಡಿ ನೋಡಿ ನಲಿವಂತೆ ॥ ೨ ॥ ಅಸಿಯಳೆಕಾರ್ಯಾರ್ಥಿಗೆ ಗರ್ವವ್ಯಾತಕೆ । ಹೊಸಮಾವು ತಿನಬೇಕು ಗಿಡದೆಣಿಕ್ಯಾಕೆ । ಪುಸಿಯಲ್ಲ ಕೃಷ್ಣನ್ನ ಪಾದಕಮಲದಲ್ಲಿ । ಮಕರಂದಪನಂತೆ ನಲಿವೋದು ಭ್ರಾಂತೆ ॥ ಶಶಿಮುಖಿ ಭೀಷ್ಮಕಸುತೆ ಜಾಲಗಳೆಲ್ಲ । ಅಸಿಧಾರಗಳಂತೆ ತಿಳಿನಿಶ್ಚಿಂತೆ । ನಸುನಗೆಯಲಿ ನಳಿನಾಕ್ಷ ಗೋಪಾಲನ । ಕೊಸರಿ ಕೊಂಡು ಮಂದಿರಕ್ಕೈತಂದರೆ । ಆಸಮಯದಿ ನೀನರ್ಥಿಯ ನೋಡುತ । ಬಿಸಜಾಕ್ಷನ ಅಪಹಾಸಮಾಡೇವಂತೆ ॥ ೩ ॥ ಶ್ರೀಃ ॥

ರಾಗ ಕೇತಾರಗೌಳ, ದ್ವಿಪದೆ.

ಅಂದಣವತಾರೆಂದು ಇಂದುಮುಖಿ ನುಡಿಯೆ ನಲ । ವಿಂದ ದೂತಿಯು ಗಡಬಡಿಸಿ ಕ್ಷಣಮುಗಿದು ಹೊಸ । ಕುಂದಣವನಿಟ್ಟು ಕೆತ್ತಿಸಿದ ನವರತ್ನ ।

ಹೊದ್ದಿದ್ದ ಪಂಚದುಪ್ಪಟಿ ಹಾಸಿಗೆಥೆಕ್ಕೆ। ಯಿಂದಲೊಪ್ಪುವ ಜರತಾರಿ। ಗೊಂಡೆಸಹಿತ ಜಾತಿಮುತ್ತುಗಳ ಕುಚ್ಚು ಮೇ । ಲಿಂದ ರಾಜಿಸುವ ಅಂದಣವ। ತಂದಿಡಲು ನಾರಿಯರ ಸಂದೋಹನೆರದು । ಚಂದ್ರಗಾವಿಯ ಸೀರೆಯುಟ್ಟವರು ಕೆಲರು। ಗಾಂಧಾರಗೌಳಕೇದಾರದೇಶಗಳಿಂದ। ತಂದ ಸೀರೆಯನುಟ್ಟ ಚಲ್ವೆಯರು ಕೆಲರು। ಅಂದವಹ ದ್ವಾರಕಿಯ ಹೊಸಬಣ್ಣಗಳನುಟ್ಟು । ಮಂದಯಾನೆಯರು ಕಂಚುಕವ ತೊಟ್ಟು ತಮ್ಮ । ಹೊಂದಿದ್ಯಾಳಿಗದಿ ನಿಂದಿಹರು ಆಭರಣ । ದಿಂದ ಪವಳದಲತೆಯ ಸೋಲಿಸುತ ॥ ೧ ॥ ಹೊನ್ನಗಿಂಡಿಯಲಿ ಪನ್ನೀರ ಪಿಡಿದವರು ಕೆಲರು। ಕಸ್ತೂರಿ ಗಂಧ ಅತ್ತರು ಹೊಸ। ಚಿನ್ನಮಯ ತಬಕಿನಲಿ ಪಿಡಿದವರು ಕೆಲರು । ಸಣ್ಣಜಾನು ಜಾಜಿಬೊಟ್ಟು ಮಲ್ಲಿಮರುಗ । ಬಣ್ಣದ ಬೀಸಣಿಗೆಯ ಪಿಡಿದವರು ಕೆಲರು। ನುಣ್ಣಾನ ಬಿಳ್ಳಿಬಿಳಿಯೆಲೆ ಪಟ್ಟಗಳ ಕಟ್ಟಿ । ಸುಣ್ಣತುಂಬಿದ ಕಾಯಿ ಸ್ವರ್ಣಲೇಪಿಸಿದ್ಧೋಳು । ಸಣ್ಣಯಾಲಕ್ಕಿಕಾಯ ಪತ್ರೆಕರ್ಪೂರ । ಚಿನ್ನಕನ್ನೆಯರು ಥಣ್ಣಾನ ಜಲದಹೂಜಿಗೆ ವಸ್ತ್ರಗಳ ಸುತ್ತಿ । ಸಣ್ಣಮಿಳ್ಳಿಗಳವೆರಸಿ ಪಿಡಿದವರು ಕೆಲರು । ಕರ್ಣಫಲಯಲೆಗಾಚು ಪಿಡಿದು ಸನ್ನದ್ಧರಾಗಿರ್ದರರಸಿ ಬಳಿವಿಡಿದು ॥ ೨ ॥ ಪರಮ ವಯ್ಯಾರದಿಂ ಹರಿಯ ಕಾಂಬುವ ಭರದಿ। ಸರಸಿಜಾನನೆಯು ದಂಡಿಗೆಯ ಹತ್ತಿ। ನಾರಿಯರ ಗಡಣದಲಿ ಹರ್ಮ್ಯಬಳಿವಿಡಿದು। ಬರುತಿರೆ ಶೌರಿ ಅರಸಿರುಕ್ಮಿಣಿಗರುಹಿ ದುಗಬಿತ್ತು ನಿನಗೆಂದು । ಸಿರಿಯರಸ ಸಂಜ್ಞೆಯಲಿ ಪರಿಹಾಸಮಾಡುತ್ತ । ಧುರದಿಂದ ಜೂಜನಾಡುತ್ತಲಿರೆ। ಧೊರೆ ಸತ್ರಾಜಿತಪುತ್ರಿ ದಂಡಿಗೆಯನಿಳಿದು ಬಳುಕುತಲಿ । ಕರಿಯ ಸೋಲಿಪ ಮಂದಗತಿಯಿಂದಿದಿರುಬರುತ । ಶ್ರೀಹರಿಯ ಕಂಡಳು ಯುರವಿನಾಭರಣದಂತೆ ॥ ೩ ॥ ಬಾಲ್ಯದಲಿ ಗೋಕುಲದಿ ಹಾಲುಮೊಸರನೆ ಕದ್ದು। ಆಲಯುವ ಪೊಕ್ಕು ಅಬಲೆಯರ ಠಕ್ಕಿಪ ಕಾಮ । ಲೀಲೆಗಳಮಾಡಿ ಕಡವೇರಿ ಕಾಳಿಂದಿ ಧುಮುಕಿ । ಕೊಲಾಹಲವಮಾಡಿ ಶಕಟನ್ನ ಎಡ । ಗಾಲಿಲಿ ವರಿಸಿ ಬಕಖರಾಸುರ ಆ। ಮೂಲಭೇದನವಮಾಡಿ ಬಿಸಿಲು ಬಿರುಗಾಳಿಯೆನ್ನದಲೆ। ಗೋವುಗಳ

ಕಾಯಿದು ಬಳಲಿ । ಕಾಲನೇಮಿಯು ಕೊಂದು ಮಗಧನುಪಟಳಕೆ । ಕಾಲವೇಗದಿ ಮಧುರಪುರವ ಬಿಟ್ಟೋಡಿ । ಆಲಯುವಮಾಡಿ ಅಂಬುಧಿಯೊಳಗೆ ಅನು । ಸಾಲ್ವನನು ಕೊಂದು ಪಾಂಡವರನುಕಚರಿಸಿ । ಖೂಳ ಶತಧನ್ವನ್ನ ಕೊಂದೆ ನೀನೂ । ಬಾಣಾಸುರನ ಪಟ್ಟಣಕೆ ಧಾಳಿಯು ನಿಟ್ಟಿ ಕುರುಪಾಂಡವರ ಯುದ್ಧದೋಳ್ । ಊಳಿಗವ ಮಾಡಿದಮ್ಮನೆ ದಣಿದು ಈಗ ಗಯ್ಯಾಳಿ ರುಕ್ಮಿಣಿಕೂಡ ಜೂಜಿನಾಟಗಳೆ ॥ ೪ ॥ ಸಮುಕದೊಳಗಾನು ಸೌಭಾಗ್ಯದೊಳು ರುಕ್ಮಿಣಿಯೆ । ಕಮಲೇಶ ನೀ ಕೃತಘ್ನನಲ್ಲೆ ದೈತ್ಯಬಾಧೆಯೊಳು ಹೊರಳೆ । ಪ್ರಮದೆ ತಾನೆಲ್ಲಿದ್ದಳದು ನೀನೆ ಬಲ್ಲೆ । ಕ್ರಮ ತಿಳಿದವರು ಅರಸುಗಳಲ್ಲದೆ ಪರಿ । ಶ್ರಮ ನಿನ್ನದೇನು ಗೊಲ್ಲರ ಹೊಟ್ಟೆಯಲಿ ಹುಟ್ಟಿ । ಗಮಕವಮಾಡಿದರೇನು ದನಗಾವಿಗಳ ಬುದ್ಧಿ । ಸಮಾನ ಬಾಹದೆ ಸಿಂಹಪೀಠ ಆರೂಢರಿಗೆ । ತಮವು ಕವಿದಿತ್ತೆನ್ನ ಹೆತ್ತವರ ಕಂಗಳಿಗೆ । ಸಮುರಾಯುರನು ಬಿಟ್ಟು ಶುದ್ಧ ಸವತಿಯ ಮೇಲೆ । ನಿನಗೆ ಕೊಟ್ಟರೊ ಕೃಷ್ಣಾ ಬ್ರಹ್ಮಗಿದು ಇಷ್ಟಾ ॥ ೫ ॥ ಇನ್ನೇನು ಭಯವೆನಗೆ ಜೀವದ್ಭಂಗೇದೊರದೆ । ನಿನ್ನ ನಂಬಿದವರಾರು ಪ್ರಾಂತು ಗಂಡರು ನೀನು । ಧನ್ವನ್ನ ಕೊಲಿಸಿದ ಕಲಿಮನಸಿನವನಲ್ಲೆ । ನಿನ್ನ ಹೆತ್ತ ತಾಯಿ ತೊಲಗಿಸಿದ ಸತ್ಪುತ್ರ । ಬಣ್ಣವಹುದೆ ನಿನಗೆ ಬಂಧುತ್ವ ನೋಡದಲೆ । ಅಣ್ಣ ಶಿಶುಪಾಲನ್ನ ಆಕ್ಷಣದಿ ತರಿದೆ । ಮಣ್ಣುಕಲಸಿದೆ ಮಾವ ಕಂಸನ್ನ ಸೈರಿಸದೆ । ಸಣ್ಣ ಅಭಿಮನ್ಯುವಿನ ಸಂಗ್ರಾಮದೊಳು ಕೊಂದೆ । ಕಣ್ಣಿಗೆ ಸೂರ್ಯನ ಮುಚ್ಚಿ ಕೊಲ್ಲಿಸಿದೆ ಸೈಂಧವನ । ನಿನ್ನ ಕಪಟರೀತಿಗೆ ಇನ್ನು ಕಡೆಯುಂಟೆ । ಕರ್ಣನ ಕಪಟರೂಪದಲಿ ಕೊಂದೆಲೊ ನೀನು । ನಿನ್ನ ಸಹೋದರಿಯೆನಿಸಿದ ದ್ರೌಪದಿಯ ಅಭಿಮಾನವನು । ಕುನ್ನಿಗಳ ಕಯ್ಯ ಕೊಳಿಸಿದ ಮಹಾತ್ಮನೋ ನೀನು । ಎನ್ನ ಪಾಡಿನ್ನೇನು ಸುಗುಣ ನೀನೂ ॥ ೬ ॥ ಈರೀತಿಯಿಂದಲಿ ಸತ್ಯಭಾಮೆ ಕಣ್ಣಿಂದ ಜಲ । ಧಾರೆಗಳ ಸುರಿಸುತ್ತ ಮೋರೆ ತಗ್ಗಿಸಿ । ನೆಲವನುಂಗುಟದಿ ಬರೆವುತ್ತ । ಹಾರಿ ವಿಧಿಯೆ ಎನ್ನನ್ಯಾಕೆ ಪುಟ್ಟಿಸಿದೆ । ಸೂರೆ ಹೋಯಿತು ಮಾನ ಸರಿಗರತಿಯರೊಳಿಂದು । ನಾರಿಜಕ್ಕನೆ ಜರಿದು ಕೆಡವುತಿರೆ ಮುರವೈರಿ

ನೋಡಿ ಧಿಗ್ಗನೆಯೆದ್ದು । ತೋರಕುಚಯುದೆಗವಚಿ ತೊಡೆಯುಮೇಲಿಟ್ಟು ಪನ್ನೀರಿನಲಿ ಮೊಗದೊಳದು । ಪವನಹಸ್ತವಮಾಡಿ ವ । ಯ್ಯಾರಿ ಕಣ್ದೆರದು ನೋಡೆ ಮಾತಾಡೆಂದು ಅಸು । ರಾರಿ ಗಲ್ಲವಿಡಿದು ಮುದ್ದಿಸುತ ಆಮನೋಹರೆಯ ಮೂರ್ಛೆತಿಳಿಸಲು ಮೌನದಿಂದಿಪ್ಪ ಮೋಹನಾಂಗಿಯನು ಮನ್ನಿಸಿದ ॥ ೭ ॥ ಶ್ರೀಃ ॥

ರಾಗ ಮಾರವಿ, ರೂಪಕತಾಳ.

ಯಾತಕೆನ್ನೊಳು ಕೋಪವೆಲೆ ಪ್ರಾಣಸಖಿ ನಿನ್ನಾ ಬೇಕೆಂದು ಬಯಸಿದೆನೆ । ಮಾತುಮಾತಾಡುತ ನೀ ಮೂರ್ಛೆಗೈಯಲು ಬಲು । ಪ್ರೀತಿಗೊಂಡೆನೆ ನಿನ್ನಾಣೆ । ಏನೋ ಕಾಣೆ ॥ ಪಲ್ಲ ॥ ಅರುಣಾಕ್ಷಿಯುಗಳ್ಹುಬ್ಬು ಕಿರಿಗಂಟು ನಿನ್ನರವಸ । ಪರಮ ಸೌಖ್ಯವು ತೋರಿತೆ । ಕೊರಳು ತಿರವುಕರಹಲ್ಲಿನ ಬಾಯಿಗೆಂಪು । ಪರಿಮಳಯೆಸವೂತಿರೆ ತುರುಬುಸಡಿಲಿ ಮುಖ । ಕ್ಕೆರಗಲು ಚಂದ್ರಂಗೆ ಮೇಘ । ಮರೆಗಟ್ಟಿದಂತಾಯಿತೆ । ಸರಸಿಜಾನನೆ ನನಗೊಂ । ದರುತೀ ಕಾಣಿಸಿತೆ ನಿನ್ನ । ಕೊರಳಾಣೆ ನಾನು ತಾತ್ಸಾರಮಾಡಿದವನಲ್ಲ ॥ ೧ ॥ ಸಡಲಿದ್ದ ಶರಗು ಪೊಂಗೊಡಕುಚಮುಡಿಬಿದ್ದಾ । ನುಡಿಗಿಡಗನ ಹವಣಾವೂ । ಮುಡಿಯಿಂದಾ ಜಗಳುವ ಬಿಡಿಹೂವು ಕಿರಿಜೆವರು । ಕಡೆಗಣ್ಣಾ ಕುಡಿಯ ನೋಟವೂ । ನಡವೀನೊಡ್ಯಾಣಾವೊ ನಟನೆಮಾಡುವದು ಕಾಲ್ಕಡಗ ಕಂಕಣರವವೂ ॥ ಮಡದಿ ನಾನೊಂದೊಂದು ಬೆಡಗ ನೋಡುತ ನಿನ್ನಾ । ನುಡಿಯು ಮರದೆನಿಂದೆ ಪೆಡಸುಮಾಡೋದು ವ್ಯರ್ಥಾ ॥ ೨ ॥ ಮುನಿಸುಗುಟ್ಟುವದುಂಟು ಮರ್ಮಗಳಾಡುವದುಂಟು । ಮನದೊಳಗೆ ದುಗುಡಬೇಡೆ ಅನುಮಾನವಿಲ್ಲಾದೆ ಅಭಿಮತಗಳು ಹೇಳೆ । ಅಪ್ರಾಲೋಚನೆಯುಮಾಡೆ । ತನುಮನ ಧನವನು ನಿನ್ನದೆಂದು ತಿಳಿಯೆ ತವಕ ಇದೇನು ಹೇಳೆ । ವನಿತೆ ಶಿರೋಮಣಿ ನೀನೆನದಂತೆ ಮಾಡದಿರೆ । ಮನಸಿಜನಾಣೆ ಗೋಪಾಲನಲ್ಲವು ಕಾಣೆ ॥ ೩ ॥ ಶ್ರೀಃ ॥

## ಸೀಸಪದ್ಯ.

ವಸುಧೆಯೊಳು ನಿನ್ನ ಲಾವಣ್ಯಾಂಬುಧಿಯೊಳು ಈ । ಕುಸುಮಶರ ನೊಂದು ಕಣಮಾತ್ರನೆಂದು । ದಶದಿಗಂತರದೊಳು ನಿನ್ನಧಿಕರಿ ಲ್ಲೆಂದು । ಹಸನಾದ ಗುಣಗಣಪಯೋಬ್ಧಿಯೆಂದು । ಸಸಿನಯೆನ್ನಯ್ಯ ಒಪ್ಪಿಸಿಕೊಟ್ಟ । ಶಾಶ್ವತಮಾನವನು ಕೊಟ್ಟ ಸಲಹೆಂದು । ಬಿಸಜಾಕ್ಷ ನಿನ್ನ ನಿಜಗುಣವ ತೋರಿದಿ ಒಂದು । ಕುಸುಮಮಾತ್ರಕೆ ನಾನು ಸಲ್ಲ ದಾದೆ ॥ ೧ ॥ ಎಲ್ಲರಿಂದಧಿಕಳೆಂದೆಲ್ಲೊ ರುಕ್ಮಿಣಿ ಯೆ । ನ್ನಲ್ಲೇನವಗುಣದ ಸುಳುವು ಕಂಡಿ । ಚೆಲ್ವಿಕಂಗಳೆ ನಿನಗೆ ಬೇಕಾದಳೇ ಅಧಿಕ । ಯೆಲ್ಲರಂಥ ಹುಲ್ಲಬಲೆಯಲ್ಲ ನಾನು । ಎಲ್ಲರಾಯರ ತನುಜೆಯಾದವಗೆ ಗುರಿಯಾಗಿ । ಅಲ್ಲದನುಚಿತ ಅನಾದರವ ಸಹಿಸಿ । ನಲ್ಲೆಯಾರೊಳಗೆ ನಗೆಗೇಡು ಆಗು ವದು ಘಣೆ । ಯಲ್ಲಿ ಬರದಿದ್ದನೇ ಪಾಪಿ ಬ್ರಹ್ಮ ॥ ೨ ॥ ಸಂಪಿಗೆರಳುಂಡ ಅಳಿಯಂತೆ ನರಳಿದೆನೋ । ತಂಪುಗಾಣದೆ ವಿಮಾನಮರಿಯಂತೆ ಹೊರಳಿ ದೆನೊ । ಸಿಂಪುಸ್ವಾತಿಯುಹನಿಗೆ ಬಾಯದೆರದಂತೆ ನಾ । ಭ್ರಾಂತಳಾಗಿದ್ದೆ ಯದುಕುಲತಿಲಕ ನಿನಗಾಗಿ । ಕಂಪಿಸಿತು ಕಾಯ ಕಾಮನ ಬಾಣ ದಿಂದ । ಇಂಪುದೋರವು ಮಾತು ಇಂದಿರೇಶ । ಗುಂಪು ಸರಿಸವತಿ ಯರು ಗುಪಿತದಲಿ ನಗುತಿಹರು । ದುಂಪುವಳಿತಲ್ಲ ಅನ್ಯಾಯವಿದು ಸಲ್ಲಾ ॥ ೩ ॥ ಎನ್ನ ವೈಕ್ಲಬ್ಯ ಎನ್ನ ವ್ಯಥೆ ಎನ್ನ ತಾಪ । ಇನ್ನಾರಿಗುಸು ರುವೆನೊ ಪ್ರಾಣನಾಥ । ನಿನ್ನ ಮನಸಿನಭಾವವ ನೀನೆ ಬಲ್ಲೆಲ್ಲೊ । ಸುಣ್ಣ ಬೆಣ್ಣೆಂದರಿದೆ ಬಿಳಿದೊಂದೆ ಬಲ್ಲೆ । ಕಣ್ಣೀರು ನವಿಲು ಸುರಿಸಿದರೆ ವ್ಯಾಧಗೆ ಮುದ್ದೆ ಈ ಹೊಂ । ಬಣ್ಣಬಲೆ ಒಬ್ಬಳೆ ಹೊಂದಿದವಳೊ । ಸಣ್ಣವಳ ಮಾತೇನು ಸಟೆಯಲ್ಲವೊ ನಿನಗೆ । ಇನ್ನಿವಳು ನಿನಗೆ ಕೊಟ್ಟದ್ದೆ ಬುದ್ಧಿ ॥ ೪ ॥

## ಸೀಸಪದ್ಯ.

ಅಲ್ಪರಿವ ಸತ್ಯಭಾಮೆಯ ಕಂಡು ರುಕ್ಮಿಣಿ । ಸೋಲ್ಮುಡಿ ಅಲ್ಲಾಡಿ ಕಾಂತನ ಮೊಗವ ನೋಡಿ । ಬಾಲೆವೊಬ್ಬಳ ಬೆನ್ನಿನಲಿ ನಿಂತು । ಲೋಲ ಲೋಚನೆಯು ಮಾಡಿದಳು ಕಿರುನಗೆಯಾ ॥ ೧ ॥ ಶ್ರೀಃ ॥

ರಾಗ ಶಂಕರಾಭರಣ, ಆದಿತಾಳ.

ಕಣ್ಣು ಹಬ್ಬಾಯಿತೆ ನಿನಗೆ। ಕಲಹಗಂಟೆ ರುಕ್ಮಿಣಿ ನೀ । ಯೆನ್ನ ನೋಡಿ ಸಣ್ಣನಗೆಯ । ನಗುವದ್ಯಾತಕೆ ॥ ಸಣ್ಣವಾಳೆ ಬನ್ನಣೆಯ । ಮಾತಿನಿಂದ ಕೃಷ್ಣನ್ನಾ । ನಿನ್ನ ಚನ್ನಾರಚಲುವಿಕೆಯ ತೋರಿ । ವಲಿಸಬಂದಿಯಾ ॥ ॥ ೧ ॥ ಚಲುವೆಯೆಂದೊಬ್ಬನ ಕಳುಹಿ । ಚಕ್ಕುಮಲಿಕೀಲಿ ದ್ವಾರಕಿಯಾ। ನಿಲಯಾನನೊಲಿಸಿಕೊಂಡೆಲ್ಲೆ । ಗಯ್ಯಾಳಿ ರುಕ್ಮಿಣಿ ॥ ತಲೆಯಾಲ್ಹೊತ್ತು ತಂದು ಮಣಿಯಾ । ಕಳವಾನಿಕ್ಕೀದಾ ತಪ್ಪಿಗೆ । ಕೆಳದಿ ನಿನ್ನಾ ಕೊಟ್ಟಾ ರಲ್ಲೆ । ಸತ್ಯಭಾಮಿನಿ ॥ ೨ ॥ ಅಂಡಾಲಿದಾ ಶಿಶುಪಾಲನೋ । ಳಾಟಾವ ಕೂಡಾದೆ ಪ್ರತಿ । ಗಂಡನ ಮಾಡಿಕೊಂಡೆಲ್ಲೆ । ಭಂಡೆ ರುಕ್ಮಿಣೀ ॥ ಗಂಡ ನಲ್ಲೆ ನಿನಗೆ ಶತ । ಧನ್ವ ನಿಮ್ಮಯ್ಯನ ಪ್ರಾಣಾ । ಕೊಂಡವನರಿಯಾ ಸದ್ದು । ಸತ್ಯಭಾಮಿನಿ ॥ ೩ ॥ ಓಡಿಬಂದಾವಾಳಿಗೆಷ್ಟು । ನಾಲಿಗೆ ರುಕ್ಮಿಣಿ ಮಾರಾ । ಬೇಡಾ ಕಮ್ಮಾರಾಗೇರಿಯೋಳ್ । ಕದರನೊಮ್ಮಿಗೆ ॥ ನೋಡಾ ತಪ್ಪಾ ನೊಪ್ಪಿಗೆ ನಿನ್ನ । ಮಾಡಿಕೊಟ್ಟಾರಲ್ಲೆ ಬಿಚ್ಚ । ಬೇಡಾ ತಾಯಿಮುಂದೆ ತೌ । ರವರ ಬಳಗವಾ ॥ ೪ ॥ ಹಿರಿಯಳಾಗಿ ನಿನ್ನಾ ಉಕ್ಕು । ಮುರಿಯಾ ಲಿಲ್ಲೆ ಮುರಹರನ್ನಾ । ಮರುಳುಮಾಡಿಕೊಂಡೆ ಮಾಯ । ಕಾರಿ ರುಕ್ಮಿಣೀ ॥ ಕಿರಿಯಳಾಗಿ ನಿನ್ನಾ ಸೊಕ್ಕು । ಸರಿಯಾಲಿಲ್ಲೆ ಕೇಶವನ್ನಾ । ಕರದೊಯಿ ದೇನೆಂದು ಬಂದೆಲ್ಲೆ । ಸತ್ಯಭಾಮಿನಿ ॥ ೫ ॥ ಅಕ್ಕರತೀರದೆ ನಿನ್ನಾ । ಚಕ್ರ ಧರನ ಒಬ್ಬಾಳೆ । ಆಕ್ರಮಿಸಿಕೊಂಡ್ಯಲ್ಲೆ ಅನ್ಯ । ಕಾರಿ ರುಕ್ಮಿಣಿ ॥ ಚಿಕ್ಕಾ ವಾಳೆವಂಡಿನೊಳ । ಗಿಕ್ಕಿತಾ ಬೆಳಸಿನಂತೆ । ಬಿಕ್ಕಿಬೀಗಿ ಬೆಳದಿಯಲ್ಲೆ । ಸತ್ಯ ಭಾಮಿನಿ ॥ ೬ ॥ ಜಲಜನೇತ್ರ ಕುಸುಮವನ್ನು । ವಲಿದು ನಿನಗಿತ್ತಾ ನೆಂದು । ಗಳಹದಿರಿ ಕೊಬ್ಬಿಲಿ ಗ । ಯ್ಯಾಳಿ ರುಕ್ಮಿಣಿ ॥ ಹಲಬಾದಿರಿ ಹರಿಗೆ ನಾನು । ಹಿರಿಯಾ ಪಟ್ಟದರಸಿ ಮಿಕ್ಕಾ । ಹಲವರೊಳು ನೀನೊ ಬ್ಬಾಳು । ಸತ್ಯಭಾಮಿನಿ ॥ ೭ ॥ ದಂಡಿನೊಳಗೆ ನಿಮ್ಮಣ್ಣ । ಭಂಡಾಗಿ ಹೋದ ಮಾನವ । ಕಂಡಾರಲ್ಲೆ ಕಲಹವ್ಯಾಕು । ದ್ದಂಡ ರುಕ್ಮಿಣಿ ॥ ಗಂಡು ಗಾದೇವತಿ ನೀ ಕೈ । ಕೊಂಡು ರಕ್ಕಸರೊಡನೆ । ಮಿಂಡಿಯಾಗಿ ಕಾದಿ ಗೆಲುವೆ । ಸತ್ಯಭಾಮಿನಿ ॥ ೮ ॥ ಮಲಗಿದ್ದಲಿಯಾನೆಬ್ಬಿಸದಿರು । ಮರಳ

ಮಾತಾಕೇಳಕಾದಿರು। ಕಲಕುವೆ ನಿನ್ನವಗುಣವಾ ಕೈ। ಗಾಯಿ ರುಕ್ಮಿಣಿ ॥ ಅವಗುಣವ ಕಂಡು ನಿನ್ನಾ । ಆಯುತಾಕ್ಷನೊಲ್ಲಾದ್ದ್ಹೋದಾ। ನವಯುವ್ವನ ವ್ಯರ್ಥವಲ್ಲೆ। ಸತ್ಯಭಾಮಿನಿ ॥ ೯ ॥ ಶ್ರೀಃ ॥

ರಾಗ ಶಂಕರಾಭರಣ, ಅಟತಾಳ.

ಸಕ್ಕಯರ್ಾಗಿನ ಚೂರಿ ರುಕ್ಮಿಣಿ । ಸೀಕ್ಷಾಳಗತ್ತರಿ ಸತ್ಯಭಾಮಿನಿ ॥ ಮನವಮುಚ್ಚಿ ಮುಗ್ಧೆ ನೀ ರುಕ್ಮಿಣಿ । ಅನುವುಪಕಾರೆ ಸತ್ಯಭಾಮಿನಿ ॥ ಕರ್ಕಶಿಕಟುಕೆ ನೀ ರುಕ್ಮಿಣಿ । ಠಕ್ಕುಭಕುತಿಯುವಳೆ ಸತ್ಯಭಾಮಿನಿ ॥ ಹಠವು ನಿನ್ನದು ಬಹಳೆ ರುಕ್ಮಿಣಿ । ನೀ ಹಟಮಾರಿ ಸತ್ಯಭಾಮಿನಿ ॥ ಎನ್ನ ಸರಿಯೇನೆ ರುಕ್ಮಿಣಿ । ಮೊನ್ನಿನ ಪೋರಿನೀ ಸತ್ಯಭಾಮಿನಿ ॥ ಕೃಷ್ಣನಂಜಿಕೆಯಿಲ್ಲೆ ರುಕ್ಮಿಣಿ। ಮುಂಚೆ ಕುಟ್ಟಿನೋಡುವ ಸತ್ಯಭಾಮಿನಿ ॥ ಮಾರಿಕೊಂಡೆಲೆ ರುಕ್ಮಿಣಿ ಕೃಷ್ಣನ್ನಾ । ನೀನಾರು ಹೇಳಲೆ ಸತ್ತಿಯುಷ್ಟನ್ನಾ ॥ ಥರವಲ್ಲ ಈಕೊಬ್ಬು ರುಕ್ಮಿಣಿ । ಹೊರಕಯ್ಯುಲ್ಹೊಡವೆ ಸತ್ಯಭಾಮಿನಿ ॥ ಗೊರಲೆ ಹುತ್ತಿಗೆ ಸರ್ಪನೆಂತೆಡೆಗೊಂಡಿ । ಉರಲುಹಾಕಿಕೊಳ್ಳೆ ಮಾಯದಕೊಂಡಿ ॥ ಭಾಗ್ಯವಿದ್ದರೆ ಉಣ್ಣೆ ರುಕ್ಮಿಣಿ । ಹೋಗಲಾಡಬೇಡವೆ ಸತ್ಯಭಾಮಿನಿ । ಘನತನವೇನೆ ಉದ್ದಂಡಿಕೆ । ಅರಮನೆಗ್ಯಾಕೆ ಬಂದೆ ನೀ ಚಂಡಿಕೆ ॥ ಮನೆ ನಿಮ್ಮಯ್ಯ ಕಟ್ಟಿಸಿದಾನೆ ನಿನ್ನ। ಜನಕನಲ್ಲಿರುವೊದು ಘನವೆನೆ ॥ ಒಳ್ಳೆದು ತಾಳಲೆ ರುಕ್ಮಿಣಿ ನಿನ್ನಾ। ಸುಳ್ಳಿಗಂಜೆನೆ ಸತ್ಯಭಾಮಿನಿ ॥ ೧ ॥ ಶ್ರೀಃ ॥

ರಾಗ ಮೋಹನಕಲ್ಯಾಣಿ, ಅಟತಾಳ.

ಬಿಕ್ಕತನಮಾಡಲಿಬೇಡೆ ತಂಗಿ । ಮೆಚ್ಚುವರು ಮೆಚ್ಚರು ಕೇಳಲೆ ತಂಗಿ ॥ ಪಲ್ಲ ॥ ಮೆಚ್ಚಿದನು ಎನ್ನಯ ನಿಶ್ಚಲಗುಣವಾ । ಹೆಚ್ಚಿದನು ತನ್ನಯ ತನುಮನ ಧನವಾ। ಅರ್ಚಿಕೆಡದಿತ್ತನು ಎಲ್ಲರೊಳು ಘನವಾ। ಮುಚ್ಚುಮರೆಯ್ಯಾತಕೆ ಕೇಳಿದರನುವಾ ॥ ೧ ॥ ಉಕ್ಕಿವುರವಣಿಸುವದು ಯೌವನದ ಮದವೆ। ಸೊಕ್ಕಿನಲಿವೋಲ್ಲಾಡಿಸುವದಿದು ಹದವೆ । ಚಿಕ್ಕವಳೆ ಎನ್ನ ನೋಡ್ಯಾತಕೆ ಕುದುವೆ । ವಕ್ಕಣಿಸಬೇಡಲೆ ಎನ್ನೊಳು

ಹುದುವೆ ॥ ೨ ॥ ತಡೆಗೋಪಾಲೆನ್ನ್ನಿಡಿ ಹಗ್ಗಾದೊಳಿಲ್ಲಾ । ಬಡಿದು ಭಕುತಿ ಸವಿಗಲಿಸುವಳಲ್ಲ ॥ ವಡಲೋಳಿಲ್ಲದ ಹಿತ ಕಿಣಿಕಿದರಿಲ್ಲಾ । ಕೆಡನ ಡಿಯಾಡಿದರೆಲೆ ಕಿತ್ತುವೆನೆ ಹಲ್ಲಾ ॥ ೩ ॥ ಶ್ರೀಃ ॥

ರಾಗ ಪೂರ್ವಿ.

ರಿಂರಿಯುಳಾದಾರೇನು ಘನವಕ್ಕಾ ಆಡಿಗೆ ಗಡ್ಡಬರೆ । ದಾವ ವೃಗಾದೊಳಾದು ಲೆಕ್ಕಾ ॥ ಪಲ್ಲ ॥ ಖರಡು ಘನವಾದಾರೆ ಜಾತಿಮುತ್ತೆ ಅಕ್ಕಯ್ಯ ಕೇಳೆ । ಹುರುಡೇನೆ ತೇಜಿಗೆ ಮುದಿಗೆತ್ತೆ ಬರಡಾವು ಕಾಮಾಧೇನಿಗೆ ಪೊತ್ತೆ ಜಾಲಿಯಮರ । ಹಿರಿದಾದಾರೆ ಹರಿಚಂದನಾಯಿತೆ ॥ ೧ ॥ ಮುದ್ದಾಲಿಗೆ ಸರಿಯೆ ಮರದ ಡೊಳ್ಳು ಗರುಡಾಗೆ ಮುದ್ದು । ಹದ್ದು ಸರಿಯಾಗುವಾದೆ ಸುಳ್ಳು ಮದಗಜಕೆ ಸಿಂಹನೆದೆ ಮುಳ್ಳು । ತಾಳಮರ ಉದ್ದಾನಾದಾರೇನು ಅದು ಹೊಳ್ಳು ॥ ೨ ॥ ಮಂದರವೆತ್ತ ಮಾಮರ ವೆತ್ತಾ ಚಿಂತಾಮಣಿ । ಅಂದಛಾಯವೆತ್ತ ಹರಳೆತ್ತಾ ॥ ಸುಂದರಿ ನೀನೆತ್ತ ನಾನೆತ್ತಾ ಪಟ್ಟದರಾಣಿ । ಅಂದರೇನು ಗುಣವಿಲ್ಲ ವ್ಯರ್ಥ ॥ ೩ ॥

ಸೀಸಪದ್ಯ.

ಮದನಬಾಣಾಕ್ಷಿ ಮೀನಾಕ್ಷಿ ಸಮಕಕ್ಷಿ ನಿ । ನ್ನುದ್ಧಟತನಕೆ ಮಾಡುವೆನು ಶಿಕ್ಷೆ ॥ ಸುದತಿ ಸತ್ರಾಜಿತ ಕುವರಿ ಭೀಷ್ಮಕಕುಮಾರಿ । ಕದನವ್ಯಾತಕೆ ನಿಮಗೆ ಹದವ ಮಾರಿ ॥ ಮದಸೊಕ್ಕಿದಾನೆಯಂತುಕ್ಕಿ ನೆರೆ ಸೊಕ್ಕಿ ಕಾ । ಲ್ಗಿದರುತ ದುರೂಕ್ತಿಗಳು ಬಯಲಿಗಿಕ್ಕಿ ॥ ಹದುಳವೆ ನಿಮ್ಮುಭಯ ದೋಷಗಳ ಈಸಭೆಯ । ಸುದತಿಯರು ಕಂಡರೆ ನಗುವರು ಭಯಾ ॥ ೧ ॥ ರುಕ್ಮಿಣಿ ಒಬ್ಬಾಕೆಗೆ ಅಂಬುವದು ಪಂಕರುಹಮುಖಿ । ನಿಶ್ಯಂಕೆಯುಲಿ ಸತ್ರಾಜಿತ ಅಂಕುರಿಯ ಬಿಂಕದಿಂ ಜರಿವರೇನೆ ॥ ಕಿಂಕರಿಯೆ ನಿನ್ನವೋಲ್ ಝೇಂಕರಿಸಿ ಎನ್ನಪ । ರ್ಯಂಕಕ್ಕೆ ಭಾಗಾರ್ಹಳಲ್ಲವೇನೆ ॥ ಅಹಂಕಾರ ಬಿಟ್ಟು ಎನ್ನಂ ಕೋರಿ ನಿನ್ನಮನೆ । ತಂಕ ಬಿಡಿನುಡಿಗಳೇನೆ ॥ ಪೊಂಕವಿಂ ಉಭಯತರು ಸಂತೋಷದಲಿ ಸಿರಾ । ತಂಕ ಹೆಂಗಳೆತನದ ಮಾತನಾಡಿ ॥ ೨ ॥ ಸತ್ಯಭಾಮೆಗೆ ಅಂಬುವ

ಮಾತು ॥ ಎಲೆ ಸತ್ರಾಜಿತ ಆತ್ಮಸಂಭವೆಯೆ ರುಕ್ಮಿಣಿ ಹಿರಿಯಳಲ್ಲೇನೆ ದಿನಗುಣಗಳಲ್ಲಿ ॥ ಛಲಕೀಗ ನಿನ್ನ ಮನ ಕಲಕಿ ವೈಷಮ್ಯದಲಿ । ಬಲಿಮೆ ಆಡುವದೇನು ಭಾಗ್ಯ ನಿನಗೆ ॥ ಸಲಿಸಿ ಆಡಿದರಿನ್ನ ನಾಡು ಯಾತಕೆ ವೃಥಾ । ಕಲಹ ನಿಮ್ಮುಭಯ ಹೆಂಗಳೆಯರೊಳಗೆ ॥ ಫಲದಿಂದ ಕಾರಣವೊ ಛಲದಿಂದ ಕಾರಣವೊ । ಲಲನೆ ಜನಮೆಚ್ಚುವಾ ಮಾತ ನಾಡು ॥ ೩ ॥ ಶ್ರೀಃ ॥

ರಾಗ ಶಂಕರಾಭರಣ, ಆದಿತಾಳ.

ತನ್ನ ಕಣ್ಣೊಳವನಕೈಯ್ಯನಿಟ್ಟು ಅನ್ಯರ । ಕಣ್ಣಕಸವನಾಯಿವಂತೆ । ನಿನ್ನ ಆಚರಣೆಗೆ ನೀನೆ ಮೆಚ್ಚಿದ್ಯೋ ಕೃಷ್ಣಾ । ಇನ್ನೊಬ್ಬರಹುದೆಂದ ರಹುದೂ ॥ ಪಲ್ಲ ॥ ಪೊತ್ತು ಗರ್ಭದಿ ನವಮಾಸ ಬೇನೆಯ ತಿಂದು । ಹೆತ್ತು ಮಗ್ಗಾಲೊಳಗಿಟ್ಟಾ ॥ ಅರ್ಥಿಯಿಂ ಜೋಗುಳಹಾಡಿ ಬೆಳಸಿ ದಂಥ । ಹೆತ್ತಾಯಿ ದ್ರೋಹಿ ನೀನಲ್ಲೆ ॥ ೧ ॥ ಹೇಸಿಕಿಲ್ಲದೆ ಹುಳಿಬೆಣ್ಣೆಗೆ ಚೌರ್ಯದಿ । ಆಸೆಬಿದ್ದವ ನೀನಲ್ಲೆ ॥ ಮೋಸಮಾಡಿ ಗೊಲ್ಲಸತಿಯರ್ಗೆ ನೀ ಕಾಮ । ನ್ಯಾಸ ಕಲಿಸಿದದು ಬಲ್ಲೆ ॥ ೨ ॥ ದಾನವರುಗ್ರತಪಮಾಡಿ ಹರನಿಂದಾ । ನಾನಾವರಂಗಳ ಪಡಿಯೆ ॥ ನೀನೋಡಿ ಸೈಂಪದಲೆ ಕೆಡಿಸಿದಿ ಅನ್ಯಾ । ಕಾರಿ ನೀ ಪರದೇವತೆಯೆ ॥ ೩ ॥ ಅಂಜಿಕಿಲ್ಲದೆ ಶಬರಿ ಯಂಜಲ ತಿಂದಘ । ಭಂಜನ ಲೋಕಪಾವನ್ನಾ ॥ ಕಂಜದಳಾಕ್ಷ ರಮಾಪತಿ ಚಂಜೆಯ ಮುಂಚೆರಗೆಳದವನಲ್ಲೆ ॥ ೪ ॥ ವಾಲಿಯ ಕೊಂದ ವನಾ ಬಾಲೆಸುಗ್ರೀವಂಗೆ । ಆಳಿಕೊಳ್ಳೆಂದ್ಹಿಡಕೊಟ್ಟೆ ॥ ಸಾಲದೀ ಅನ್ಯಾ ಯಾ ಸಲೆ ಋಷಿಪುತ್ರನ । ಸಾಲದಲೆಯ ಕುಟ್ಟಿಬಿಟ್ಟೆ ॥ ೫ ॥ ಸೆರೆಬಿದ್ದಾ ಸತಿಗಾತಾ ಸೇತುವೆಗಟ್ಟೆ ನೀ । ಪುರಿಹೊಗಿಸಿದ ಅಂತಃಕರಣೀ ॥ ನೆರೆನವ ಮಾಸ ತುಂಬಿರೆ ಕಾಂತಾರಕ್ಕೆ । ಕಳುಹಿರಳಲಿದಳ್ತರುಣಿ ॥ ೬ ॥ ದಾನವ ಕೊಟ್ಟ ಬಲೀಂದ್ರನ ತುಳಿದಿ ನಿ । ದಾನಿರಾಧೇಯನ ಅಳಿದೆ ॥ ಆನಂದದಿಂ ದರ್ಶಿಸಿದ ಭೂಪತಿಯ ಸ್ತಂಭ । ಕಾನಿಸಿಬ್ಬಾಗ ಮಾಡಿಸಿದೆ ॥ ೭ ॥ ಗುಣಸಮುದ್ರ ನೀನೆಂದು ನಂಬಿಗೆಯಿಂದ । ಗುಣನಿಂದ್ಯ ಕೀರ್ತನೆ ಗೈದೇ ॥ ಅಣುಗೆಯೆನ್ನಪರಾಧ ಎಣಿಸಾದೆ ಗೊಲ್ಲರ । ಅಣುಗ ನೀಯೆನ್ನ

ರಕ್ಷಿಪುದು ॥ ೮ ॥ ಹೇಳಿದವರ ಮಾತು ಆಲಿಸಿಕೇಳದೆ। ಸ್ನಾಲಯಕ್ಕಾಗಿ ನಡೆ ಬೇಗಾ॥ ಈಲೋಕದೊಳು ಅಶ್ರೀಕ್ಷಿತೆಯೆಂಬಪಕೀರ್ತ್ಯೆನ್ನ। ಪಾಲಿಗೆ ನೀತರಬೇಡಾ ॥ ೯ ॥ ಪೊಡಮಡುವೆನೊ ಪದಕೆ ಪದತಳರೇಣು । ಇಡುವೆನೊ ತಿಲಕವಮಾಡಿ ಶಿರ॥ಗ್ಹಿಡಿದೆಳವೆನೊ ಹೆಳಲು । ಕೊರಳಿಗೆ ಹಾಕಿ ಎಳವೆನೊ ಬಿಡಿಸುವರಾರೂ॥ ೧೦ ॥ ಬಾವನ್ನಕೆ ಅಹಿಸುತ್ತಿದಂದದಿಯೆನ್ನಾ । ಬಾಹುಗಳಿಂದ ಕಟ್ಟುವೆನೊ ॥ ಮಾವಿನ್ಹಣ್ಣಿಗೆ ಗಿಳಿ ಧುಮಿಕಿದಂದದಿ ಗಲ್ಲ। ನೋವಂತೆ ಉಗುರಿಕ್ಕುವೆನೊ ॥ ೧೧ ॥ ಎನ್ನ ಪೋಲುವ ಚಲ್ವ। ಹೆಣ್ಣು ನೀತೋರೋ। ಗು। ಣಾರ್ಣವಕೇನು ಮತ್ಸರವೊ॥ ಕಣ್ಣಲಿ ನೋಡೆನ್ನ ಅವಯುವ ಇಂದಿರೆ। ಎನ್ನ ರೂಪವ ಬಯಸುವಳೊ ॥ ೧೨ ॥ ಪೊನ್ನಕಲಶಜಕ್ಕವಕ್ಕಿಯೊ ಬೆಳಲ್ಗಾಯೊ। ಸ್ವರ್ಣಗಿರಿಕಂಜ ಮುಕುಳಗಳೊ॥ ಎನ್ನ ಕುಚದ್ವಯಕಾಗಿ ಗಿರಿಮುಳುಗುತ್ತಿರೆ। ಬೆನ್ನಿಂದ ನೀನೆತ್ತಲಿಲ್ಲೆ॥ ೧೩ ॥ ತಳಿರು ಸೋಲಿಪಪದ । ತಳ ನೋಡು ಎನ್ನಯ। ಚಲುಚಂದುಟಿ ತೊಂಡೆಹಣ್ಣೊ॥ ಕಳಕಳ ಪಾಶಕ್ಕೆ ಕಮಲ ನೀರಿನೊಳು ವ್ಯಾ। ಕುಲ ಮನದಿಂದ ಮುಳುಗಿಹುದೊ॥ ೧೪ ॥ ಎಳೆವಳ್ಳಿಯ ಪೋಲ್ವ ಚಲುವ ಕೋಮಲತನು। ಬಳಕುವ ಮಧ್ಯಪ್ರದೇಶಾ॥ ಸುಳಿನಾಭಿ ಬಾಳೆದೊಡೆ ಕಂಗಳು ನೈದಿಲೆ । ಸಲೆಕುಸುಮುವ ಸೋಲಿಪವೊ ॥ ೧೫ ॥ ಮಲ್ಲಿಗೆ ಪೋಲುವಾ ಮಂದಸ್ಮಿತ ಯೆನ್ನ । ಹಲ್ಲಿಗೆ ಮಗ್ಗೆಗಳೀಡೆ॥ ಒಲ್ಲೆನೆಂಬಾ ಪರಿಯೇನನ್ನ ರುಕ್ಮಿಣಿ । ಚಲ್ಲಿದಳೇನೊ ಮಚ್ಚಿಕೆಯಾ ॥ ೧೬ ॥ ಊಡಿದಳೆಣ್ಣೆಯು ತಲೆಗೆ ವಲಿವ ಮದ್ದು। ಮಾಡಿದಳೇನೊ ಮಾಯಕಾರಿ ॥ ಕೂಡಿದ್ದೆ ಹಾಲು ಸಕ್ಕರೆಯಂದದಿ ಸವತಿ। ಮಾಡಿದಳ್ ಜೋಡಗಲ್ವಂತೆ॥ ೧೭ ॥ ಕೊಡದ್ಹಾಲಿಗೆ ಹುಳಿಯೆರದಳೊ ಜೇನಿನ। ಕೊಡದೊಳು ನೀರ್ಬೆರಸಿದಳೊ॥ ಹಿಡಿದಳು ದ್ವೇಷವ ಹಿತದಿಂದ ಬೆಲ್ಲವಾ । ಗುಡಿದಚ್ಚು ಬೇವುಮಾಡಿದಳೊ॥ ೧೮ ॥ ತನುಮನ ಧನವನು ನಿಸಗೆ ಒಪ್ಪಿಸಿದೆನೊ । ಮನಬಂದಂತೆ ನೀಮಾಡೊ॥ ಕನಿಕರವುಳ್ಳರೆ ಕಾಯಿದುಕೊ ದ್ರೌಪದಿ । ನೆನಸಿದರ್ಕಾಯಿದೆ ಗೋಪಾಲಾ ॥ ೧೯ ॥ ಶ್ರೀ ॥

ರಾಗ ಶಂಕರಾಭರಣ, ಆದಿತಾಳ.

ಮದನನಂಬಿಗೆನ್ನಾ ನೀ ಮುಂದುಮಾಡಬೇಡಾ । ಯದುಃಕುಲ ಲಲಾಮ ಎನ್ನಾ ಮಂದಿರಕೆ ಬಾರೊ ॥ ಪಲ್ಲ ॥ ಆರ್ತಳಾದೆನಲ್ಲೊ ಕಾಮಾತುರಾ ಬಲುಹೊಲ್ಲೊ । ಸ್ವಾರ್ಥಮಾಡಿದಲ್ಲೊ ಅಬಲೆ ಧೂರ್ತಳು ನಾನಲ್ಲೆ ॥ ೧ ॥ ಚಿಕ್ಕವಳೆಂದೆನ್ನ ಬೆನ್ನಾ ಚಿತ್ತಜ ಬಿದ್ದಾನೊ । ಹೊಕ್ಕೆ ನಿನ್ನಾ ಮರೆಯನು ಬಿಡಿಸಿಕೊಳ ಬಾರದೇನೊ ॥ ೨ ॥ ಅಲರಂಬನಂಬಿಗೆ ನಾನು ಅಳಲುವಾದು ನೋಡೊ । ಘಳಿಗೆ ತಾಳಲಾರೆ ಎನ್ನಾ ಘಾಸಿಮಾಡಬೇಡ ॥ ೩ ॥ ಶ್ರೀಃ ॥

ರಾಗ ಶಂಕರಾಭರಣ, ಆದಿತಾಳ.

ಬಾರೋ ಕೃಷ್ಣಾ ನಮ್ಮನೆಗೆ । ಪೋರರಾಟಿಕೆ ಇದೇನೊ ॥ ಗಾರುಮಾಡುವಾದು ನಿನಗಿದೊಳ್ಳಿತೆ ಹಿಂದಣ ತುರು । ಗಾರತನ ಇನ್ನು ಬಿಡಡಾಯಿತೆ ಮನ್ಮಥ ಮನ । ಸೂರೆಗೊಂಬಾಗ ಕಣ್ಣಾರೆ ನೋಡುವದು ನೀತಿಯೇ ॥ ೧ ॥ ಬಾರೊ ನಮ್ಮನೆಗೆ ಗೋಪಾಲಕೃಷ್ಣ । ಪೋರತನದಲ್ಲಿ ಮದವೇರಿದಾ ಗಜ ಕೆಡಹಿ ॥ ಮೀರಿದ್ದಾ ಜಟ್ಟಿಗರನೆಲ್ಲಾ ಮಡುಹಿ ಬಿಲ್ಲು ಹಬ್ಬಕೆ । ಯೇರಿಸಿಡೆ ಮುಂದೆ ಕಾಲಿಲೆಡಹಿ ಮಾವನಸುವ ॥ ಹೀರಿಕೊಂಡು ಹೆತ್ತವರ । ನಾರ ಬಿಡಿಸಿದವನಲ್ಲೆ ॥ ಬಾರೆ ನಿಮ್ಮನೆಗೆ ಶ್ರೀಸತ್ಯಭಾಮೆ ಬಾರೆ ನಿಮ್ಮನಿಗೆ ॥ ೨ ॥ ಬಿಲ್ಲು ಝೇಂಕಾರಿಸಿ ಶರಗಳೆಲ್ಲಾ ಪಿಡಿದಾನು ಕಾಮಾ । ನೆಲ್ಲಾ ಕೈಲಾಗದಲೆ ರೂಢಿಸಿದಾ ಇರುಳು ಹಗ ॥ ಲೆಲ್ಲಾ ಬಿಡದೆಲೆ ಪೀಡಿಸಿದಾ ಸವತಿಯ ಮಗ । ನಲ್ಲೆ ನಿನ್ನ ತಡದವನ ಬಲ್ಲುಮೆ ತೋರಿಸೆಂದಾಳೊ ॥ ೩ ॥ ಅರವಿಂದಾ ಬಾಣಾವು ನಿನ್ನಾ ಅವಯವಾದೊಳಟ್ಟಿಕೊಂಡು । ದುರುಳ ಕಂದರ್ಪನ ಕಬ್ಬುಬಿಲ್ಲಾ ಸೆಳದು ಹುಬ್ಬಿನಾ ॥ ನೆರೆಯೂಲಿಟ್ಟಾರೇನು ಆದು ಹೊಲ್ಲಾ ಅಯ್ಯೊ ಇನ್ನೆಷ್ಟ । ಬ್ಬರದ ಬಾಲೆ ಅರ್ಭಕನ ಅವಗುಣಗಳೆಣಿಸಿದೆ ॥ ಬಾರೆ ನಿಮ್ಮನಿಗೆ ಶ್ರೀಸತ್ಯಭಾಮೆ ಬಾರೆ ನಿಮ್ಮನೆಗೆ ॥ ೪ ॥ ಅರ್ಭಕ ನೀ ಮೊಲೆಯಾ ಗೊಟ್ಟವಳಸುವಾ ಹೀರಿ ಕೊಂದುದಿಲ್ಲೆ । ಅರ್ಭಕ ಶಕಟನ ವಧೆಯಾ

ಲಿಲ್ಲೆ ಮತ್ತಿಯುವುರ ॥ ಅರ್ಭಕತನದಲ್ಲಿ ಕೆಡಹಲಿಲ್ಲೆ ಶಂಬರನ ಕೊಂದಾ । ಅರ್ಭಕರತಿಯು ತಂದ ಅರ್ಭಕನೆಂದುಸುರಿದಿ ॥ ಬಾರೊ ನಮ್ಮನೆಗೆ ಗೋಪಾಲಕೃಷ್ಣ ॥ ೫ ॥ ಒಂದನಾಡಿದರೆ ಹನ್ನೊಂದನಾಡಿದಲ್ಲೆ ಮ। ದಾಂಧಕಾರ ಬಂದು ಮುಸುಕಿತಲ್ಲೆ ॥ ಪ್ರಾಯದವಳು ಮುಂದುಗಾಣಾಳೆಂಬೊದು ಸಿದ್ಧಲ್ಲೆ ನನ್ನ ಮನಸು । ಬಂದಾರೆ ಬಾಯ್ಗೆ ನಿರ್ಬಂಧಾವೆ ಕೋಕಿಲಗಾನೆ ॥ ಬಾರೆ ನಿಮ್ಮನೆಗೆ ಶ್ರೀಸತ್ಯಭಾಮೆ ಬಾರೆ ॥ ೬ ॥ ಸರಸಿಜಾಕ್ಷಿ ನಿನ್ನಾ ಅಪಹರಿಸಿಕೊಂಡಾಳೇನೊ ಭುವನ। ದರಸುತನವು ಈಕೆಗೆ ಬಂತೇನೊ ಯಾದವರೊಳೊಬ್ಬಾ ॥ ರರಸುತನಕೆ ಅರ್ಹರಿಲ್ಲಾವೇನೊ ಸ್ತ್ರೀರಾಜ್ಯವನು । ಮರಸಿತೊ ದ್ವಾರಕಿ ಮುರ। ಹರ ಇದು ನಿನ್ನ ಮಹಿಮೆ ॥ ಬಾರೊ ನಮ್ಮನಿಗೆ ॥ ೭ ॥ ವಾರಿಜಾಕ್ಷಿ ನೀನು ಶುದ್ಧಭ್ರಾಮಕಾಳೆ ರುಕ್ಮಿಣಿಗೆ । ಏರಿ ಒಂದೆ ರಥದಲಿ ಹೋಗಿದ್ದೆ ದೇವಿಯು ಪೂಜೆಮಾಡು ॥ ಶಿರಲು ಕರವಪಿಡಿದು ಗೆದ್ದೆ ಜೀವಾವೆಚ್ಚಿಸಿ । ತೋರಿತಂದೆ ಇವಳಿಗಿಂತ ವಿಚಾರಿದ್ದ ಹೆಂಗಳಿನ್ನಾರೆ ॥ ಬಾರೆ ನಿಮ್ಮನೆಗೆ। ಶ್ರೀಸತ್ಯಭಾಮೆ ॥ ೮ ॥ ಸೋದರನ ಗಡ್ಡಾಮುಂಡೆ ಆದರದಿ ತೆಗಸಿ ನಿಶ್ಚಯು । ವಾದ ಗಂಡನೊಬ್ಬನಲ್ಲಿ ಬಿಟ್ಟೊ ಅಂತರಂಗದಾ ॥ ಭೇದದಿಂದ ದ್ವಿಜನ ಕಳುಹಿಕೊಟ್ಟಾ ಅಯ್ಯಯ್ಯೊ ಅನು। ವಾದಾ ಮಾಡಿದವಳಾ ಗುಣ ನಾದಾನಾಚಿಕೆಯಾ ಬಿಟ್ಟು ॥ ೯ ॥ ಹೆಚ್ಚನಾಡಾಬೇಡಾ ನಿನ್ನಾ ಇಚ್ಛೆಯಾ ಬಂಟ ನಾನಲ್ಲ। ಮೆಚ್ಚಿದಿವಳಾ ನೀನಂಬೋದಿನ್ನೇನೆ ಮನೋಭಾವ ॥ ಬಿಚ್ಚಿಹೇಳಿದಿನನ್ನಾ ತಿಳಿದೇನೆ ನಾನು ಮೊಗ । ಡಿಚ್ಛೆಯಾನಾಡೂವಾನಲ್ಲಾ ಮನಕೆಬಂದಂತೆ ನೀ ಮಾಡೆ ॥ ಬಾರೆ ನಿಮ್ಮನೆಗೆ ಶ್ರೀಸತ್ಯಭಾಮೆ । ಬಾರೆ ನಿಮ್ಮನೆಗೆ ॥ ೧೦ ॥

## ದ್ವಿಪದೆ.

ಎಲೊ ಕೃಷ್ಣ ಹೆಂಗಳೆಯರುಸುರು ವಳಿತಲ್ಲ । ಸಲೆನೆಚ್ಚಿದವಳ ನೀ ಶಳದು ಬಿಸುಟುವದಲ್ಲ ॥ ತುಪ್ಪದಾಗಿನಕಪ್ಪು ಆಯ್ದುಕಡಿಗಿಟ್ಟಂತೆ । ತಪ್ಪಿನಲಿ ಕದ್ದ ಕಳ್ಳಿಯನು ಗದ್ದಲಿಸಿದಂತೆ ॥ ಕಂಗುಮಾಡಿದೆ ಎನ್ನ

ಕಂಡವರೊಳಗೆ। ಭಂಗಬಡಿಸಿದೆ ನೀನು ಬಾಹ್ಯಳನು ಮಾಡಿ ॥ ರಹಸ್ಯದೊಳು ಯೇನುಮಾಡಿದರೆ ಕುಂದಿಲ್ಲ। ಹಾಸ್ಯ ಮಾಡಿದೆ ಹತ್ತರೊಳಗೆ ಅಯ್ಯಯ್ಯೊ ॥ ಕಂಡು ನಗುವರ ಮುಂದೆ ಕಾಲಿಡವಿ ಬಿದ್ದಂತೆ। ಭಂಡುಮಾಡಿದ್ಯೋ ಜಗದ್ಭಂಡ ನೀನೆಲವೊ ॥ ಅಂದಚಂದಗಳ್ಯಾಕೆ ಗಂಧಲೇಪನವ್ಯಾಕೆ। ಸಂದಟಿತವಾದ ಹಾರಾವಳಿಗಳ್ಯಾಕೆ ॥ ಈಕೊರಳೊಳಗೆ ಈಸೊಗಸು ಈಶೃಂಗಾರ। ಕಾಸುಬಾಳದು ನಿನ್ನಗಲಿ ಓರ್ವಳಿರಲೂ॥ ಅನ್ನೋದಕವ ಕೊಂಡರೆ ನಿನ್ನ ಪಾದವೆ ಸಾಕ್ಷಿ। ಬೆನ್ನುಹಚ್ಚಿನೋಡು ಹಾಸಿಕೆಗೆ ಎನಗೆ ದೀಕ್ಷೆ ॥ ಬಿಳಿದೊಸ್ತ್ರವನುಟ್ಟು ಭಸಿತವ ಪೂಸಿ। ಯೂಸನವ। ಪುಲಿಚರ್ಮವ ಮಾಡಿ ಶಕ್ತಿಯ ಪೂಜಿಸಿ ನಿನ್ನ ॥ ವಲಿಸದಿದ್ದರೆ ನಿನ್ನ ಲಲನೆಯಲ್ಲವೊ। ಸತ್ಯಭಾಮೆಯೆಂಬ ಹೆಸರ್‍ಯಾಕೆ ನಿನ್ನ ॥ ಕಲ್ಲಿನಂಥ ಮನಸು ಬೆಣ್ಣೆಸರಿಮಾಡಿ ಕರಗಿಸದಿದ್ದರೆ ನಾನು। ಹೆಣ್ಣೆ ಕಣ್ಣಿಘುಬ್ಬಿಗೆ ನೋಡು ಕಡುದೂರವಲ್ಲ। ನಿನ್ನ ರುಕ್ಮಿಣಿ ನೀನು ಸುಖದಲ್ಲಿರುವ ಶ್ರೀನಾಥ। ನನ್ನ ಗೊಡವೆ ನಿನಗ್ಯಾಕೆ ಅಜನ ಪಿತನೆ ॥ ೧ ॥

ರಾಗ ಶಂಕರಾಭರಣ, ಅಟತಾಳ.

ಕಂಡಿಯಾ। ರಂಗನಗುಣ ಕಂಡಿಯಾ ॥ ಕಂಡಕಂಡವಳನು ಕೂಡಿ ವಿಹಾರಿದನೆನ್ನ। ಪುಂಡರೀಕಾಕ್ಷನ ಪಾದಪದ್ಮಂಗಳಾ ॥ ಪಲ್ಲ ॥ ಕದ್ದು ಬೆಣ್ಣೆಯ ಮನೆ ಪೊಕ್ಕು। ಸಿಗ। ಬಿದ್ದು ಬೈದರವರು ನಕ್ಕು। ಕಳ್ಳ। ಬುದ್ಧಿ ಬಿಟ್ಟುಬರಿ ಶುದ್ಧನಾಗಿ ಪ್ರ। ಸಿದ್ಧರಸುಗಳಂತೆ ತಿದ್ದಿತೀರಿಸುವದು॥ ಕಂಡಿಯಾ ॥ ೧ ॥ ತುರುವಕಾಯ್ದನು ಕೆಲಕಾಲಾ। ಗೊಲ್ಲ। ತರಳರಲ್ಲಿ ತನ್ನ ಮೇಳಾ। ಅದು। ಮರದು ವಾಜಿಯರಥ ಕರಿಘಟೆವೀರರೋಳ್। ಪರಿಪರಿ ವಿಭವಾದಿ। ಧೊರೆಯಾಗಿ ಮೆರೆವನ ॥ ಕಂಡಿಯಾ ॥ ೨ ॥ ಚಂಡು ಹಾರಿಸಿ ಬುತ್ತಿಹಿಡಿವಾ। ಗಾವು। ಗೊಂಡ್ಯ ಗೊಲ್ಲರ ಬೆನ್ನಿಲ್ಹೊರುವಾ। ಈಗ। ದಂಡುತೆಕ್ಕೆಯ ಕಾದು। ಕೊಂಡು ಸುದತಿಯಾರ। ಮುಂದಾಡ್ಯಧರ ಸವಿ। ದುಂಡು ವಲಿವನಿವ ॥ ಕಂಡಿಯಾ ॥ ೩ ॥ ಮುಂಜೆರಗಿನ ಬುತ್ತಿಯಲ್ಲೆ। ಗುಲ। ಗಂಜಿ ಆಭರಣಾವುಯಲ್ಲೆ। ಈಗಾ॥ ಕುಂಜರಗಮನೆ

ಯುಕರ್ೂಡಿ ಷಡುರಸನ್ನಾ । ಭುಂಜಿಸಿ ನವರತ್ನ ಪುಂಜನಾಗಿಹನಿವ ॥ ಕಂಡಿಯರ್ಾ ॥ ೪ ॥ ಕುಬ್ಜೆಯಾ ಕೂಡಿದವನಲ್ಲೆ । ಚಿಕ್ಕ । ಶಬರಿಯುಂಜ ಲಿಗ್ಹೇಸಾಲಿಲ್ಲೆ । ಅಬುಜದಳಾಕ್ಷಿಯರಷ್ಟಭಾರ್ಯರತಿ । ಪ್ರಬಲವಾಗಿ ರಾಜವಿಭವದಲ್ಲಿಹುದ ॥ ಕಂಡಿಯರ್ಾ ॥ ೫ ॥ ನೀಲೆಭದ್ರೆಮಿತ್ರೆವಿಂದೆ । ಈ । ಬಾಲೆಲಕ್ಷಣೆ ಕಾಳಿಂದಿ । ಅನು । ಕೂಲೆ ಜಾಂಬವತಿ ಮೇಳಾದಿ ಪ್ರೇಮಸು । ಶೀಲೆ ರುಕ್ಮಿಣಿ ಬೆಲ್ಲ । ದಾಲೆಯುಂತಿವಳೀಗ॥ ಕಂಡಿಯರ್ಾ ॥ ॥ ೬ ॥ ಆಗಲಿ ಅತ್ತಿತ್ತಗಲೀಸಾ । ಎನ್ನ । ಸೊಗಸು ಅಧರಲೇಸು ಗ್ರಾಸಾ ಮಾಡಿ । ನಗಧರ ಎನ್ನಯು ಮೊಗನೋಡಿ ಮಂದಹಾ । ಸಗಳಿಂದ ನುಡಿಸೆನ್ನಾ । ಹಗೆಯುಳಾಳಾದನ್ನಾ ॥ ಕಂಡಿಯರ್ಾ ॥ ೭ ॥ ಹೆಸರು ಗೊಂಡೇನು ಫಲವಮ್ಮಾ । ಎನ್ನ । ಉಸುರಿವಳಿಗೆ ಮುಟ್ಟಲಮ್ಮಾ । ಈ । ಪಶುಕಾಯ್ವ ಗೊಲ್ಲಾನ ಪುಸಿಮಾತಾ ಪಾಠಿಸಿ । ವಶಮಾಡಿಕೊಳಬಂದ ವ್ಯರ್ಸನ ಹಚ್ಚಿದನಿವ ॥ ಕಂಡಿಯರ್ಾ ॥ ೮ ॥ ಧೊರೆತನ ಲೇಸಾಯಿ ತಮ್ಮಾ । ಮುರ । ಹರ ಮುಂಗುತಿಗಾಳಾದಾನಮ್ಮಾ । ಪ್ರಾಣ । ದರಸಾ ಮಾಡಿದನಲ್ಲೆ । ವಿರಸ ಗೋಪಾಲೆನ್ನಾ । ದರಿಸಾದೆ ಸವತಿಯು । ಹರುಷಮಾ ಡಿದನಿವ ॥ ಕಂಡಿಯರ್ಾ ॥ ೯ ॥ ಶ್ರೀಃ ॥

ರಾಗ ಶಂಕರಾಭರಣ, ಆದಿತಾಳ.

ಪತಿಯೊಳು ಶಪಥವಮಾಡಿ ಸತ್ರಾಜಿತ । ಸುತೆ ಮಂದಿರಕ್ಕೈದಿದಳೂ ॥ ಅತಿಹರುಷದಲಿ ಮಜ್ಜನಮಾಡಿ ಧೌತವಸ್ತ್ರವನುಟ್ಟು । ಗಂಧವ ಪೂಸಿ ದಳೂ ॥ ೧ ॥ ಮುತ್ತಿನ್ಹಾರವು ಹಾಕಿ ಮುತ್ತಿನೋಲೆಯನಿಟ್ಟು । ಮುತ್ತು ಕೈಕಟ್ಟ ಕಟ್ಟಿದಳೂ ॥ ಮುತ್ತಿನುಂಗುರನಿಟ್ಟು । ಮುತ್ತಿನ ಮೂಗುತಿ । ಅರ್ಥಿಂದ ನಾಸಿಕಕಿಟ್ಟೂ ॥ ೨ ॥ ಮುತ್ತಿನ ಬುಗುಡಿ । ಮುತ್ತಿನ ಹುವ್ವು ಮುತ್ತಿನ । ಸುತ್ತುಕಾಲುಂಗುರನಿಟ್ಟು ॥ ಮುತ್ತು ಕೆತ್ತಿಸಿದ ಪಿಲ್ಲೆಯು ನಿಟ್ಟು ಪಾದಕ್ಕೆ । ಮುತ್ತೈದೆ ಅನುವಾದಳಾಗಾ ॥ ೩ ॥ ಮುತ್ತು ಮಾಣಿಕ ನವರತ್ನ ತುಂಬಿದ ತಟ್ಟೆ । ಹತ್ತಿಲಿಟ್ಟಳು ಬಳಿವಿಡಿದೂ ॥ ಶಕ್ತಿಯಾ ಲಯುಕಾಗಿ ಹೊರವಂಟಳಬಲೆಯು । ಮೊತ್ತದೋಳ್ಮದಕರಿಯಂತೆ ॥

॥ ೪ ॥ ಪೊರವುಟ್ಟು ಪಾದಕೆ ಎರಗಿದಳ್ಹಗದಂಬಾ । ಕರುಣಾದಿ ರಕ್ಷಿಪ ಳೆವ್ಮಾ ॥ ಸ್ವರ್ಣಪುಷ್ಪಗಳಂಜಲಿಯಿಂದಾ ದೇವಿಯ । ಚರಣಕ್ಕೆ ನೀವಾಳಿಸಿದಳೂ॥ ೫ ॥ ಹಾಕುತಾಸನ ತಾನು ಏಕಮನಸಿನಿಂದ । ಸೂಕಿಸಿ ಪರಿತಾಪವನೂ ॥ ಲೋಕೈಕನಾಥ ಈಶ್ವರನರ್ಧಾಂಗಿನಿಯ ಮನೋ। ವ್ಯಾಕುಲದಿಂದ ಧ್ಯಾನಿಸಿದಳೂ ॥ ೬ ॥ ಹೊನ್ನ ಕಲಶದಗ್ರೋದಕವ ಲಲ ನೆಯರು । ಸ್ವರ್ಣತಟ್ಟೆಯೊಳಿರಿಸಿದರೂ ॥ ಪುನ್ನಾಗ ಜಾಜಿಮಲ್ಲಿಗೆ ರಕ್ತ ವರ್ಣದ್ಹೂ । ವನ್ನೆ ದೇವಿಗೆ ತಂದಿರಿಸಿದರೂ ॥ ೭ ॥ ಅಗರುಚಂದನಗಂಧ ಅರಸಿನ ಬುಕ್ಕಿಟ್ಟು । ಸೊಗಸಾದ ಅಚ್ಚಕೇಸರದಾ ॥ ತೆಗೆಸಿಟ್ಟ ಗಂಧ ಬಟ್ಟಲ ತುಂಬಿ ಮೃಗನಾಭಿ । ತರಿಸಿಟ್ಟರಬಲೆಯರಾಗಾ ॥ ೮ ॥ ಬಿಲ್ವ ಪತ್ರೆಯು ಮೂಂದಳಿರು ಉತ್ತರಣೆಯು । ಸಲ್ಲಲಿತವಾದದೂರ್ವೆಗಳೂ ॥ ಚಲ್ವಕೆಂದಾವರೆ ಚಾರುನಾಗಸಂಪಿಗೆ । ಅಲ್ಲಿಟ್ಟರಾಗ ಹರುಷದಲಿ ॥ ೯ ॥ ಚಂದ್ರತುಂಬಿದ ಕರಡಿಗೆ ಕಾಡಿಗೆ ಭರಣಿ। ಅಂದವಾದೂದುಕಡ್ಡಿಗಳೂ ॥ ಮಂದಾರಮಾಲೆಯ ತಂದಿರಿಸಿದರಾಗ । ಮಂದಗಮನೆಯರುತ್ಸವದಿ ॥ ॥ ೧೦ ॥ ಮಜ್ಜನಗೈಸಿ ದಿವ್ಯಾಂಬರವನುಡಿಸಿದಳ್ । ಧೂರ್ಜಟಿಸತಿಗೆ ನೇಮದಲಿ ॥ ಮಜ್ಜನಕಳೆ ಗಂಧಲೇಪನ ನಿನಗೆಂದು । ಉಜ್ಜುಗದಿಂದ ಮಾಡಿದಳೂ ॥ ೧೧ ॥ ಸಿರಿಮೊಗಕರಸಿನವೆರಸಿ ತಿಲಕವನ್ನು । ಮೆರವ ಫಣೆಯೊಳಿರಿಸಿದಳೂ ॥ ಎರಳೆಗಂಗಳಿಗೆ ಕಾಡಿಗೆಹಚ್ಚಿ ಚಂದ್ರವ । ಸುರಿ ದಳು ಬೈತಲೆಗಾಗಾ ॥ ೧೨ ॥ ಮುತ್ತಿನ ದಂಡೆಯ ಮುಡಿಸಿ ಆಭರ ಣವ । ತೆತ್ತಿಸಿಟ್ಟಳು ದೇವತೆಗೆ ॥ ಸುತ್ತಿಟ್ಟ ಜಾಜಿಮಲ್ಲಿಗೆ ಹಾರಗಳಿತ್ತ । ಕಾತ್ಯಾಯನಿಗರ್ಪಿಸಿದಳೂ ॥ ೧೩ ॥ ಬಿಲ್ವಪತ್ರೆಯು ಮೊದಲಾದ ದೂರ್ವಾಂಕುರ । ವಲ್ಲಭೆಗರ್ಪಣೆಮಾಡಿ ॥ ಎಲ್ಲಕುಸುಮಗಳ ಸುರಿ ವುತ ಶಂಭುವಿ । ನೊಲ್ಲಭೆಯ ಪೂಜೆಮಾಡಿದಳೂ ॥ ೧೪ ॥ ಬೆಳಗುವ ದೀಪಾವಳಿ ತಾರೆಗಳೊಳು । ಹೊಳೆವ ಶಶಿಗಳೆರಡಂತೆ ॥ ಹೊಳದ ಪೂಜ್ಯಳು ಪೂಜಿಸುವಪರಿವಾರ । ಕಳಕಳ ಪಾರ್ಶ್ವಗಳಿಂದಾ ॥ ೧೫ ॥ ಅಗ ರಿನ ಧೂಪವು ನಗಜಾತೆಗರ್ಪಿಸಿ । ಸೊಗಸಿಂದ ಕಡ್ಡಿಬತ್ತಿಗಳೂ ॥ ಮುಗುಳುನಗೆಯಿಂದಲಿ । ಮೊಗನೋಡಿ ಬೆಳಗುತ । ನಗಧರನೊಲಿಮೆ

ಬೇಡಿದಳೂ ॥ ೧೬ ॥ ಷಡುರಸಾನ್ನದ ನೈವೇದ್ಯವ ಕೊಟ್ಟಳು । ಶರಗಿಂದ ಮರೆಯುಮಾಡಿದಳು ॥ ಹರನ ಪಟ್ಟದರಾಣಿ ಮಾಧವನಧರದ । ಮಧುವ ಯೆನಗುಣಬಡಿಸೆಂದು ॥ ೧೭ ॥ ಬಿಳ್ಳಿಲೆ ಸುಣ್ಣ ಕರ್ಪೂರದಡಿಕೆಯ ಹೋಳೂ । ಥೆಳ್ಳಾನೆಲೆ ಕಾಚುಕಾಯಿಪತ್ರೆ ॥ ಉಳ್ಳ ತಾಂಬೂಲವ ಹರನಪಟ್ಟದರಾಣಿ । ಕೊಳ್ಳೆಂದು ವಿನಯುಮಾಡಿದಳೂ ॥ ೧೮ ॥ ಧೂಪವನೆತ್ತಿದಳು ದೀಪವ ಬೆಳಕಿಲಿ । ಆಪಾರ್ವತಿಗೆ ಹರುಷದಲಿ ॥ ಶ್ರೀಪಾದಕೆ ತಂದು ಬೆಳಗಿದಳಾರತಿ । ಖ್ಯಾಪಿಖ್ಯಾಪಿಗೆ ತಂದುಕೊಡಲು ॥ ೧೯ ॥ ಪುಷ್ಪಾಂಜಲಿಯ ಸಮರ್ಪಿಸಿ ಆನಂದ । ಬಾಷ್ಪಗಳಿಂದ ವೈಮರದು ॥ ಸುಪ್ರಸನ್ನಳು ಎನಗಾಗೆಂದು ದೇವಿಯು । ಪ್ರಾರ್ಥಿಸಿದಳು ಮರೆಹೊಕ್ಕು ॥ ೨೦ ॥

ರಾಗ ಪಾಡಿ, ಆದಿತಾಳ.

ಅಂಬಾ ಪಾಲಿಸೆ ಜಗ । ದಂಬಾ ದಯುಮಾಡು ಜಯು । ಸ್ತಂಭಾ ಶೋಭನನಿತಂಬಾ ॥ ನಂಬಿದೆ ನಾನಿನ್ನ । ಹಂಬಲಮಾಡಿದೆ । ಶಂಭುವಿನರ್ಧಾಂಗಿನೀ ಅಂಬುಜವದನೆ ॥ ಪಲ್ಲ ॥ ಶಶಿಧರರುದ್ರನ್ನ ರಾಣಿ ವರದೆ ಕಲ್ಯಾಣಿ । ಕಿಸಲಯುಪಂಕಜಪಾಣಿ । ಹಸುಮಗಳೇನಾ । ನುಸುರಿದ ಶಪಥಕೆ । ಪುಸಿಯುಮಾಡದೆ ಸ್ಥಾ । ಪಿಸಿ ಶೌರಿಯು ಎನ್ನೊ । ಶವ ಮಾಡು ನೀ । ಬಿಸಜಾಂಬಕಿಯೆ । ಅಸಮುದಯಾಳು ನಿನ್ನ । ಬಸುರಿಲಿ ಬಂದೆ ॥ ೧ ॥ ಭೃಂಗಾಕುಂತಳೆ ನೀಲವೇಣಿ ಲಲಿತಮೃದುವಾಣಿ । ಶೃಂಗಾರ ಸೊಬಗಿನ ಶ್ರೇಣಿ । ಹೆಂಗಳೆ ನಾ ನಿನ್ನ । ಕಂಗೊಳಿಸಿದೆನೆ ಅ । ನಂಗನಯ್ಯ ಸಿರಿರಂಗನ ಕೋಮಲ । ಅಂಗಸಂಗಕ್ಹಾರೈಸುವೆ ಎನಗಿದು । ಮಂಗಳಮಾಡಿಸು ಮಮ ದೇವತೆಯೆ ॥ ೨ ॥ ಮಂದಸ್ಮಿತ ಮುಖಾರ । ವಿಂದಾ ಸುರಮುನಿವೃಂದ ವಂದಿತಪಾರ ಭ । ಕ್ತಿಂದಾ । ಕಂದೆರದೀಕ್ಷಿಸು ಕರುಣಾರ್ಣವಳೆ । ಸುಂದರವಚನದಿ ಶುಭವಾಕ್ಯವ ಕೊಡು । ಕಂದರ್ಪನಪಿತ ಕೃಷ್ಣ ತಾನೆ ಬಲು । ವಿಂದ ಬರುವದಯು । ವಿಂದು ನೀಮಾಡೆ ॥ ೩ ॥ ಶ್ರೀಃ ॥

ರಾಗ ಶಂಕರಾಭರಣ, ಆದಿತಾಳ.

ಸುರನದಿ ಜಲದಿಂದ ಸುರನದಿಗೆ ಅರ್ಘೆ । ಎರವಂದದಿ ಮಹಾಕಾಳಿ । ಸರಸಿಜಾಕ್ಷಿಗೆ ಸಿರಿಯುರಸನೊಲಿಯುಲೆಂದು । ವರರೂಪೆ ವರವಿತ್ತಳಾಗ ॥

॥ ೧ ॥ ಚಂದಿರವುಖಿಗಪ್ಪಣೆಯ ಕೊಡಿಸಲಾ । ನಂದದಿಂದೊಂದಿಸೆ ಪದಕೇ ॥ ಪುಂಡರೀಕಾಕ್ಷಿ ಸತ್ರಾಜಿತತರಳೆಗುವೆ । ಗಂಡನೊಲಿಸಿಕೊಡಿಸಿದಳೂ ॥ ೨ ॥ ಬೆಲ್ಲಾದ ಹಾಲಿಗೆ ಬೆಲ್ಲಾನೈವೆದ್ಯಾ ಕೊಟ್ಟಂತೆ । ನಲ್ಲೆ ಕ್ಷೀರಾಬ್ಧಿ ಕನ್ನಿಕೆಗೆ ॥ ಗೊಲ್ಲಾರಾ ಕುಲದೀಪನಧರಪಾನೌತಣ । ದಲ್ಲಿ ತಂದಿಟ್ಟಳು ಅಂಬಾ ॥ ೩ ॥ ಶ್ರೀಃ ॥

ರಾಗ ಭೈರವಿ, ಏಕತಾಳ.

ಕೊಟ್ಟೆನೊರವ ಕೊಟ್ಟೆನೊರವ ಸತ್ಯಭಾಮಿನಿ ॥ ಕೃಷ್ಣವುನೆಗೆ ಬಂದ ನಾದಯುವಿಟ್ಟೆ ಕಾಮಿನಿ ॥ ೧ ॥ ಹರಸಿದೆನೇ ಭಕುತಿಗಂಗೀಕರಿಸಿ ಆ । ಕರುಷಣ ನಿನ್ನತ್ತವಾಡಿದೆ ಸರಸಿಜಾಕ್ಷನ ॥ ೨ ॥ ಅಂಜಬೇಡ ಅಂಜ ಬೇಡ ಅಭಯವಿತ್ತೆನೆ । ಕಂಜಲೋಚನ ಕೃಷ್ಣನ ನಿನ್ನಕೈಗೆ ಕೊಟ್ಟೆನೆ ॥ ೩ ॥

ರಾಗ ಸೌರಾಷ್ಟ್ರ, ಆದಿತಾಳ.

ಕಾಳಿಯು ಕೊಟ್ಟವಾತಿಗೆ ಹರುಷಿತಳಾಗಿ । ಕಾಲಿಗೆರಗಿ ಬೀಳ್ಕೊಂಡೂ ॥ ಆಳಿಯರೊಡಗೂಡಿ ವೋಲ್ಮನದಿ ನಗುತ ತ । ನ್ನಾಲಯ ಪೊಕ್ಕಳುತ್ಸವದಿ ॥ ೧ ॥ ಆರೋಗಣೆಯ ವಾಡಿದಳುಬ್ಬಿನಲಿ ಕೈಗೆ । ಗೀರು ಗಂಧವ ಹಚ್ಚಿದಳು ॥ ವಿಾರಿದ್ದಪರಿತೋಷಿತಳಾಗಿ ಫಣೆಗೆ ಕ । ಸ್ತೂರಿ ತಿಲಕನಿಟ್ಟಳಬಲೆ ॥ ೨ ॥ ವುನಕೆಬಂದಾಭರಣಗಳೆಲ್ಲವನಿಟ್ಟು । ಕನಕ ಲತೆಯುಲಿ ರಾಜಿಸುವಾ ॥ ಘನತರವಾದ ಸೀರೆಯನುಟ್ಟು ಕುಪ್ಪಸ । ತನು ಕೆಕ್ಕರಿಸುವಂತೆ ತೊಟ್ಟೂ ॥ ೩ ॥ ಬಿಳಿಯೆಲೆ ವೆಲುವುತ ಹಾವಿಗೆಯನು ವೆಟ್ಟೆ । ಚೆಲುವ ಹಂಸದ ಗಮನದಂತೆ । ಉಳ್ಳ ಆದರಣೆ ಪಾದಾವಧಾನಜತನ । ದಲ್ಲಿ ಯೇರಿದಳು ಸಜ್ಜೆಯವಾ ॥ ೪ ॥ ಹತ್ತಿಕುಳಿತಳು ಪೀಠವ ಸುದತಿಯರೊಳು । ಅತ್ಯಂತ ಅತಿಶಯದಿಂದಾ ॥ ಸತ್ಯಭಾವೆಯು ಶ್ರೀಕೃಷ್ಣನ ಪದದಲ್ಲಿ । ಚಿತ್ತವಿಟ್ಟು ಧ್ಯಾನಿಸಿದಳೂ ॥ ೫ ॥

ದ್ವಿಪದೆ.

ಇದುಯೇನು ಸೋಜಿಗವೊ ಎನ್ನ ಜೀವ ವುರುಗುತಿದೆ । ಕದಡಿತಂತಃ ಕರಣ ಕಾಯ ತಲ್ಲಣಿಸುತಿದೆ ॥ ಕರಗುತಿದೆಯೆನ್ನ ವುನಸು ಕಡುದೈನ್ಯ

ದಬಲೆಯು ಮೇಲೆ। ಎರಗುತಿದೆ ಎನ್ನ ಮನಸು ಎಂದಿನಂತಲ್ಲ॥ ಏನು ಮಾಯವಿದೆಲ್ಲ ವಿಧಿತಾನೆಬಲ್ಲ । ಮಾನಿನಿವಿಲಾಪ ಹೆಚ್ಚಿತು ಎನಗೆ ತಾಪ॥ ಆರ್ತಳಾದವಳ ನಾನಾದರಿಸಲಿಲ್ಲ। ಸ್ವಾರ್ಥಮಾಡಿದೆ ರುಕ್ಮಿಣಿಗೆ ನನ್ನದಲ್ಲ॥ ಪತ್ರಬರದರೆ ನಾನು ಪಾಲಿಸಲಾದೆ। ಮಿತ್ರೆಯನು ಕಳುಹಿದರೆ ಮನ್ನಿಸಲಾದೆ ॥ ಲಲಿತಾಂಗಿ ತಾನೆಬರೆ ನೋಡಿ ನುಡಿಸದಲಿದ್ದೆ। ಛಲದಿಂದ ರುಕ್ಮಿಣಿಯೊಳು ಜೂಜನಾಡುತಲಿದ್ದೆ ॥ ಸಥೆಮಾಡಿ ಎನಗೆ ನುಡಿದಳು ಮನಕೆ ಬಂದಂತೆ। ಹಿತಮಾಡಿ ನಾನವಳ ಹತ್ತಿಲಿಕರದವನಲ್ಲ ॥ ಎಷ್ಟು ನೋಯಿತು ಮನವು ಎನ್ನ ತಾತ್ಸಾರಕ್ಕೆ। ಕಷ್ಟಬಡಿಸಿದೆನಯ್ಯೊ ಕೋಮಲಾಂಗಿಯನು ॥ ಕೊರಳಸಿರಬಿಗಿದು ಕಂಗೆಡುವಾಗ ಅವಳ। ಕುರುಳ ತಿದ್ದುತ ಗಲ್ಲವಿಡಿದು ಮುದ್ದಿಸಲಿಲ್ಲ॥ ಮುಡಿಬಿಚ್ಚಿ ಬೆನ್ನಿನಲಿ ಜಡಿವ ಸಮಯದಲಿ। ಕುಡುತೆಕಂಗಳಧಾರೆ ವರತೆಗೊಂಡಿರಲೂ॥ ಜರಿವ ರಾಗುಟಿಚೌರಿ ಹೆರಳು ಭಂಗಾರ । ಸರಳಮುತ್ತುಗಳು ಸರಿದು ಉರುಳುವ ವಿಚಾರಕ್ಕೆ॥ ಕೆಮ್ಮೋವಿವಣಗಿ ಕಸ್ತುರಿತಿಲಕ ಬೆವರಿನಲಿ। ನಣ್ಮೊಗವ ಪಸರಿಸಿ ತಲೆಬಾಗಿ ಅಬಲೆ॥ ಎಲ್ಲೆ ಕಾಠಿಣ್ಯ ಎನಗ್ಯಾಕೆ ಸಂಧಿಸಿತೊ । ಸಲ್ಲಲಿತ ವಚನಗಳು ಸಮಯಕ್ಕೆ ಬರಲಿಲ್ಲ॥ ಅರಸುಮಗನಿಗೆ ಹೊಗೆಯನಿಟ್ಟು ಬಳಲಿಸಿದಂತೆ । ಪರುಷಪಾಷಾಣವನು ಸಮಮಾಡಿ ಬಿಟ್ಟಂತೆ ॥ ಬಾಳೆಹಣ್ಣಿಗೆ ಗರಗಸವಕೊಂಡ ತೆರನಂತೆ। ಕಾಲಬಲವಂತ ಕಾಠಿಣ್ಯದವ ನಾನಲ್ಲ॥ ಕೆಟ್ಟೆನೀ ದ್ವಾರಕಿಯು ಬಿಟ್ಟು ಮಡುವುಧುಮುಕಲೊ। ಬೆಟ್ಟದ ಮರೆಯಹೊಗಲೊ ಭೂಮಿವಳಬಗೆದು ಹೊಗಲೊ॥ ಈಪಶ್ಚಾತ್ತಾಪದಿಂದ ರೂಪತಪ್ಪಿಸಿಕೊಳಲೊ । ಕೋಪದಿಂದೊಡದು ಬ್ರಹ್ಮಾಂಡದ್ಹೊರಗಾಗಲೊ ॥ ಜಗವ ದ್ವಿಜರಿಗೆ ಕೊಟ್ಟು ಜಟಿಧಾರಿಯಾಗಲೊ । ಆಗಲಿ ನಾನಿರಲಾರೆ ಆಯತಾಕ್ಷಿಯಳ॥ ವನಿತೆತಾಪಕೆ ನಾನು ವನವಾಸಿಯಾಗಲೊ। ದನಗಾವಿ ನಾ ಹೋಗಿ ದಿಗ್ವಸ್ತ್ರನಾಗಲೋ॥ ಹರುಷದಿಂದರಸಿದ್ದ ಮಂದಿರಕೆ ಇಲ್ಲಿಂದ ವಾಜಿಯನು। ಹಾರಿಸಲೊ ಏನುಪಾಯವು ಮಾಡಲೆಂದು ॥ ಕರಿವರದಕೃಷ್ಣ ಮಾನಿನಿಯಮನ ತಿಳಿವದಕೆ। ಧರಿಸಿದನು ಕೊರವಂಜಿ ರೂಪವಾಕ್ಷಣದಿ ॥

## ರಾಗ ನಾಟಿ, ಝಂಪೆತಾಳ.

ಜಯಜಯ ಜಗನ್ನಾಥ ಜಯಸುಪರ್ಣವರೂಥ । ಜಯಕೌಸ್ತುಭಾಭರಣ ದುರಿತಹರಣಾ ॥ ಜಯಪೀತವರಣ ಆವರಣ ದೈತೇಯಹರಣ । ಜಯಭವೋತ್ತರಣ ಜಯತೀರ್ಥಚರಣಾ ॥ ಜಯಜಯಾ ॥ ೧ ॥ ವಾರಿಜಾಸನ ತನಯ ನಾರದಮುನೀಶ ಸುರ । ಪಾರಿಜಾತದ ತರುವಿನೊಂದು ಕುಸುಮಾ ॥ ದ್ವಾರಕೀನಿಲಯ ಅಚ್ಯುತಗೆ ಕೊಡೆ ಸ್ನೇಹದಿಂ । ನಾರಿರುಕ್ಮಿಣಿಗಿತ್ತ ನೆವದಿಂದಲಿ ॥ ಜಯಜಯಾ ॥ ೨ ॥ ಶ್ರೀರಮಣನೊಡನೆ ಸತ್ರಾಜಿತಕ್ಷಿತಿಪ ಸುತು । ಮಾರಿ ಮುನಿದರೆ ಶೌರಿ ಕರುಣದಿಂದಾ ॥ ವಾರಿಜಾಕ್ಷಿಯ ಮನವಿಚಾರಮಾಡುವೆನೆಂದು । ನಾರಾಯಣೀಯೆಂಬ ಕೊರವಿರೂಪಾದ ॥ ಜಯಯಾ ॥ ೩ ॥ ಶ್ರೀಃ ॥

## ರಾಗ ಸಾರಂಗ, ಆದಿತಾಳ.

ಜಡೆಬಿಚ್ಚಿ ಸಂಪಿಗೆಣ್ಣೆಯ ಹಚ್ಚಿ ನಲುವಿನಲಿ । ಜಡಿವುತಿರ್ಪವು ಜಂಘೆವರಸೀ ಕೇಶಗಳೂ ॥ ವಡಮುರಿದ್ದಿಕ್ಕಿ ವಾರಣದಿಂಗಲ್ಲಗಳಲ್ಲಿ । ಸುಳಿಕುಂತಳಗಳಾ ರಚಿಸಿದಳು ಕೊರವಂಜಿ ॥ ೧ ॥ ಸ್ವರ್ಣಲತೆಗಳಿಂದಾವರ್ಣವಾಗಿದ್ದ ನೀಲ । ವರ್ಣದ ಚಾರುಪಾವಡದಿ ಸಡಗರದಿ ॥ ಕುರುಳುಗೂದಲು ತಿದ್ದಿ ಕಸ್ತೂರಿತಿಲಕವ । ಧರಿಸಿದಳು ಮೆರವಾ ಫಣೆಯಲ್ಲಿ ಅರ್ಥಿಯಲಿ ॥ ೨ ॥ ಹರುಷಾದಿಂ ಪಂಜೀನೊಲಿಯನಿಟ್ಟು ಕರ್ಣದಲಿ । ಧರಿಸಿದಳು ಕುಚ್ಚ್ಚಮುತ್ತಿನ ಬಾವುಲಿಗಳಾ ॥ ಬರಸೀ ಹಚ್ಚೆಯ ಬಟ್ಟುಫಣಿಯ ಅರಳೆಲೆಯೂ ಮುದ್ದು । ಸುರಿಸೀ ಶೋಭಿಸಿತು ಕೊರವಿಂಗೆ ಏನೆಂಬೆ ॥ ೩ ॥ ಹತ್ತುಬೆರಳಿಗೆ ವಜ್ರಕೆತ್ತಿಸಿದುಂಗುರ । ಗುತ್ತಾಪಟ್ಟಿಗೆ ಹಚ್ಚೆಮಣಿಯಣ್ಣೆನೂಲೂ ॥ ದುತ್ತಾಮಾಯಾರಾಣಿ ಸುರಹೊನ್ನಪಾದಾ । ಸರಶಕ್ತೀ ಬಿರುದುಗಳಾಧರಿಸಿದಳೂ ಕೊರಳಿಂಗೇ ॥ ೪ ॥ ಶಂಖಮಣಿ ತಾವರೇಮಣಿ ಕರ್ಪುರಮಣಿಯೂ । ಬಿಂಕಾದ ತುಲಸೀಮಣಿ ಗಂದದಾಮಣಿಯೂ ॥ ಪೊಂಕಾದಿಂ ಸ್ಫಟಿಕಾದಾಮಣಿಗಳ್ಹಾರಗಳಾ ಬಿರಿ । ದಂಕಾ ಕೊರವಂಜೀ ಧರಿಸಿದಳೂ ಕೊರಳಿಂಗೆ ॥ ೫ ॥

ಗುಲಗಂಜೀನ್ಹಾರಾವು ಗುರತೀಗ್ಹಾಕಿದಳೂ । ಹೊಳೆವ ಯಂತ್ರಗಳೂ ಮುಂದಲೆಗೆ ಕಟ್ಟಿ । ಥಳಥಳಿಸುವ ಪಿಂಛತೂರಾಯಿಗಳನಿಟ್ಟು । ಸುಳಿ ನಾಭಿಯಲ್ಲಿ ಕಟ್ಟಿದಳ್ಹೊನ್ನಘಂಟೆ ॥ ೬ ॥ ವಂಟಬೆರಳಿಗೆ ಸುತ್ತ ಮೇಂಟಿ ಕೆಗಳನಿಟ್ಟು ಗೋ । ರಂಟೀ ಹಚ್ಚಿದಳೂ ಪದಕರ ನಖಗಳಿಗೆ । ಕಂಠಕ ಕಣುದೃಷ್ಟಿತಾಕಾದಿರಲೆಂದು ಕಲ । ಕಂಠಿ ಗಲ್ಲಕೆ ಕಪ್ಪಾನಿಟ್ಟು ವಪ್ಪಿದಳೂ ॥ ೭ ॥ ಸಂಪೀಗೆ ಜಾಜಿಮಲ್ಲಿಗೆ ಬಟ್ಟುನೊಲ್ಲೆ । ಇಂಪಾದ ಕ್ಯಾದೀಗೆ ಸುರಹೊನ್ನೆ ಝಲ್ಲೆ ॥ ತಂಪೀನ ಮದನಬಾಣದ ಪಾರಿಜಾತದ । ಗುಂಪಿನ್ಹಾರಗಳಾ ಧರಿಸಿದಳೂ ಕೊರಳಿಂಗೆ ॥ ೮ ॥ ಕಂಬುಕಂಧರೆ ಚಲ್ವ ಮುಂಗಯ್ಯಿಗಳಿಗೆ ಶ್ರೀ । ಗಂಧಾ ಲೇಪನವಾ ಮಾಡಿದಳೂ ಉತ್ಸಹದಿ ॥ ತುಂಬಿದ್ಹುವ್ವಿನಾ ಕುಪ್ಪಸತೊಟ್ಟು ತೋಳಿನಲಿ । ಬೊಂಬೆಪಟವಾಳಿಯ ಬಿಗಿಬಿಗಿದುಟ್ಟೂ ॥ ೯ ॥ ಶಳದುಮಲಗಂಟೂ ಸಿಂಗನ ಬೆನ್ನಿನಲಿ ಕಟ್ಟಿ । ಹೊಳವ ರತ್ನದವುಟ್ಟಿ ಬಲಗಯ್ಯಲ್ಹಿಡಿದೂ ॥ ನಲವಿಂದ ನವಿಲಗರಿ ನಳವಡಿಸುತಲಿ । ವೊಳಗೂವ ಕಿನ್ನರಿ ಹೆಗಲಾಮೇಲಿಟ್ಟೂ ॥ ॥ ೧೦ ॥ ಗಲ್ಲಾದಲೊತ್ತಿದ ಬಾಯಿದೊಂಬಲಕರ । ಹಲ್ಲ ತೋರಿಸುವಂತೆ ಕಿರಿನಗೆ ನಗುತಾ ॥ ವಲ್ಲಭೆ ರುಕ್ಮಿಣಿಯು ಮೊಗವಾ ನೋಡುತಲಿ । ಫುಲ್ಲನಾಭನು ಕೊರವಂಜೀ ರೂಪಾದಾ ॥ ೧೧ ॥ ಕಾಲಾನೂಪುರ ಝುಣಝುಣಝುಣರೆನುತಾ । ಮೇಲಾದ ಸ್ವರದಿ ಗಾಯನವ ಮಾಡುತ್ತಾ ॥ ಆಲಯ ಹೊರವಂಟು ರಾಜಬೀದಿಯಲಿ ಬ । ಹಳಾ ಸಂಭ್ರಮದಿಂದ ಬರುತಿದ್ದಳಾಗ ॥ ೧೨ ॥ ಶ್ರೀಃ ॥

ರಾಗ ನೀಲಾಂಬರಿ, ಅಟತಾಳ.

ಭೈರವಾನಾಶ್ರಿತೆ ಯೆನ್ನಾ ವೈರಿಗಳಾ ಹಲ್ಲುಮುರಿಯೆ ಬಿರಿದಾಹೊತ್ತಿಗೆ ನಾನಿನ್ನಾ । ಮರೆಯಾಬೇಡೆನ್ನಾ ॥ ಸ್ವೈರಿಸಾದವರ ನೀನು ಶೀಕ್ಷಿಸಾಬೇಕೆ ಸಾದೇವಿ । ಸರಿಯಿಲ್ಲಾದಾ ಶಾಕಂಭರೀಶಾಂಭವೀತಾಯಿಅಾ ॥ ॥ ೧ ॥ ಭಕ್ತೀಮಾಡಿದೇ ನಿನ್ನಲ್ಲಿ ಕಾತ್ಯಾಯನೀಮಹೋದರಿ । ಮುಕ್ತಿಕೇಶೀಮಹಾಕರಾಳಿ ಕೇಳೆ ಮಹಾಕಾಳಿ ॥ ಸತಿಯಾರೊಳಗೆ ಶಿವಸತಿ

ನೀನೆನಿಸಿಕೊಂಡೆ ಎತ್ತಿಕೊಳ್ಳೆ ಎನ್ನಾ ಮಾತಾನೂ ಯೋಶಿವದೂಶಿ ॥ ॥ ೨ ॥ ಚಪ್ಪನ್ನಾದೇಶವನ್ನು ತಪ್ಪಾದಾಲೆ ತಿರುಗೂವೆ । ಕಪ್ಪುಗೊರಳನ ಧರ್ಾಂಗಿನೀ ಕೃಷ್ಣಾಪಿಂಗಳೆ ॥ ಒಪ್ಪೀಕೊಳ್ಳೆ ಎನ್ನಾ ಮಾತಾ ಕಪ್ಪಾನಿಟ್ಟು ಜಗಕೆಲ್ಲಾ । ಉಪ್ಪುಕಾಠಾ ಮಾಡೀತೋರುವೆ ಯೋ ತಪಸ್ವಿನೀ ॥ ೩ ॥ ವಿಕಟಾಂಗೀ ಎನ್ನಾ ಕೀನು ಪ್ರಕಟೀಸೀದ ಕಾರಣಾ । ಮಾಕುಟವರ್ಧವರಿ ಗ್ಹೀಳಿದೆ ಮೆಚ್ಚುಪಡಡೆ ॥ ಅಕಟಾ ನಿನ್ನಾಕಳೆಂಮು ಆದರಾಮಿ ಕಾಯಿ ಬಂದು । ಭ್ರುಕುಟೀವಿಲಾಸಿಭದ್ರೆ ಗುಣಸಮುದ್ರೆ ॥ ೪ ॥ ಹಿಂದೆ ನಾರದ ಸ್ವಯಂವರದರಿಧು ರುಕ್ಮಿಣಿಗೆ ಕೊರವ್ಯಾಗಿ । ಬಂದು ಹೇಳೀದೊಂದೇ ಮಾತಾನೂ ಸತ್ಯಮಾಡಿದೆ ॥ ಬಂಧಾನದೊಳು ದೇವಕಿಗೆ ಕಂದನಃಕೃ ಷ್ಣವಾ ಪೇಳಾ । ಬಂದ ಬ್ರಹ್ಮಾಕೊರವಂಜಿಗೆ ಬೆನ್ನಿಲಿಯಿದ್ದೆ ॥ ೫ ॥ ಇಂದು ಎನಾಗೊಲಿಯಾಬಾರೆ ಇಂದ್ರಾಣಿ ರುದ್ರಾಣಿ ದಯ । ದಿಂದ ಲಾಯರ್ಾಧಾಕ್ಷಾಯಣಿ ಕೇಳೆ ಬ್ರಹ್ಮಾಣಿ । ನಿಂದಲ್ಲಿ ನೀ ನೆಲೆಯಾಗೆ ಹೊಂದೀದಲ್ಲಿ ಕಲೆಯಾಗೆ । ಬಂಧ ವಾಕ್ಯಾಗಳಲ್ಲಿ ವಲಿಯೆ ವಸ ನಾದಿ ನಲಿಯೆ ॥ ೬ ॥ ಹದಿನಾಲ್ಕು ಲೋಕಾವನ್ನು ಪದರಾದಾಲೆ ತಿರುಗಿದೆ । ಯದುಕುಲೋತ್ತುಮನ ದ್ವಾರಾವತಿಯೊಳಗೆನ್ನಾ ॥ ವದನಾ ಶಂಕಿತವಾಗಿ ವಾಕೂಸಿದ್ಧಿಯಾ ಕೊಟ್ಟು । ಮುದದಿಂದಾ ಲೇಸೂ ತೋರಿಸಿ ಮುಹುಮೆವುಳಿಸೇ ॥ ೭ ॥ ಶ್ರೀ ॥

ವಚನ.

ರಿಂ೧ಗೆಂದು ಕೊರವಿ ತನ್ನ ಇಷ್ಟದೇವತೆ ಕುಲದೇವತೆಗಳನ್ನು ಕೊಂಡಾ ಡುತ್ತ ರಾಜಬೀದಿಯೊಳು ಬರುವ ಚಂದಾ

ರಾಗ ಯರಕಲಕಾಂಬೋಧಿ, ಆದಿತಾಳ.

ಗಟ್ಟಲೋಮಿದಾ ವಾನಲುಗುರಿಸೆ । ಚಟ್ಟಲೋ ಚಾಮಲೊ ಗಡ್ಡಿಲೊ ಬಿರಗೆ । ಹಟ್ಟಿ ಆವಲಕುಮ್ಯಾಂತಗಟ್ಟಿಗಾಗಲಗೆ । ತಟ್ಟಿಗಂಪಲಿಚ್ಚಿಕಡವ ಗಟ್ಟಿಚಲದೆಸ್ತಿ ॥ ೧ ॥ ನಲ್ಲಿಕೂರಬದ್ದಿಕೂರನಲ್ಲೇರುದೆಸ್ತಿ । ಪಲ್ಲಿಲೋಬಿ ರಿಗಿ ಪೋಲಿಮಾರ ಜೊನ್ನದೆಸ್ತಿ ॥ ಬಲ್ಲಿವಿಾತೋವೆೊಗನಿಶೋನಸನ್ನ

ಗಿಸರಪಿಸ್ತಿ । ತ್ರೆಳ್ಳಮುಸಲಿ ಅತ್ತತೋರೊಟ್ಟೆಗಾಲಿವೆಸ್ತಿ ॥ ೨ ॥ ಬಿಚ್ಚ
ಪೆತ್ತ ಅತ್ತನೂರ ದಿಕ್ಕನಂಪಿಸ್ತಿ । ಬಿಚ್ಚಭಾನಿವೊಗನ್ನಿಬಕ್ರೆ ದೆಚ್ಚ
ಶಾಲವಿಸ್ತಿ ॥ ಅಚ್ಚಅಗಸೆನೂನೆರೊಟ್ಟೆಬಿಚ್ಚಬೆಲ್ಲಪಚಡ್ಚ । ಇಚ್ಚಭಾರ
ದೀಂಟವಿಸಾದ ಚಲ್ಲಬುಚ್ಚುಕೊಂಟಿ ॥ ೩ ॥ ಆಕಲೂವೀಕಲು ನಿಡುಗಂಟು
ಕಟ್ಟುಕೊಂಟಿ । ಚೇಕೆನಚೋಟನೊಮುಂಚಪೋಸುಕೊಂಟಿ ॥ ಏಕಚಿತ್ತ
ಮಾನಾವಂಟಿ ಪದಾಲುಪಾಡುಕೊಂಟಿ । ಲೋಕಮೆಲ್ಲಜಡಿಸಂಪಿ ನೂನೆ
ಬೂಸಕೊಂಟಿ ॥ ೪ ॥ ಬುಕ್ಕಪೇಡಿದೆಚ್ಚಿನೆ ಮುಕ್ಕಕಂಟಿಸ್ತಿ । ಲೆಕ್ಕಲೇನಿ
ಮಲ್ಲಿಪೂಲು ಮೊಗರಿಪೂಲುದೆಸ್ತಿ ॥ ಅಕ್ಕಲಾಕುಅಮ್ಮಲಾಕುಗುಡಿಸೆವಪ್ಪಿ
ಗಿಸ್ತಿ । ಇಕ್ಕಡೋಕೇರಿಲೋನಯಾರಕಜಪ್ಪವಸ್ತಿ ॥ ೫ ॥ ಶ್ರೀಃ ॥

## ರಾಗ ರೇಗುಪ್ತಿ ಆದಿತಾಳ.

ಕೇರಿಕೇರಿಯೊಳಾಡುತ ಪಾಡುತ ವ । ಯ್ಯಾರದಿ ಮನೆಮನೆ ತಿರು
ಗುತಾ ॥ ನಾರಿಮಣಿಯರಿಗೆ ಶಕುನವ ಹೇಳುತ । ಬೀರುತ ಸುಖವನು
ಸಾರುತ ॥ ಪಲ್ಲ ॥ ಒಮ್ಮೆ ಹೆಜ್ಜೆಯ ಮುಂದಕೆಯಿಟ್ಟು ನಡೆವಳು ।
ಒಮ್ಮೆ ವಯ್ಯಾರವಮಾಡುವಳು ॥ ಒಮ್ಮೆ ನವಿಲಗರಿ ನಳವಡಿಸುತ
ಭ್ರೂಲ । ತ್ರೊಮ್ಮೆ ವಿಲಾಸವಮಾಡುವಳೂ ॥ ೧ ॥ ಒಮ್ಮೆ ಕಿನ್ನರಿಯನ್ನು
ಪಿಡಿದು ಪಾಡುವಳು । ಒಮ್ಮೆ ಪುಟ್ಟಿಯ ತಿರುವುವಳೂ ॥ ಒಮ್ಮೆ ಕಾಲಾ
ಟದಿ ನಲಿವುತ । ಒಮ್ಮೆ ಸೊಗಸುದೋರುವಳೂ ॥ ೨ ॥ ಅಮ್ಮಮ್ಮ ಇವ
ಳಾವದೇಶದ ಕೊರ್ವೆಂದು । ಕೂರ್ಮೆಯಿಂದಲಿ ಪುರಜನರೂ ॥ ಹರ್ಮ್ಯ
ಗಳ್ಹತ್ತಿನೋಡುತ ಹಗಲುಚಂ । ದ್ರಮನೆಲ್ಲುದಿಸಿದನೆಂದೂ ॥ ೩ ॥ ದ್ವಾರಾ
ವತಿಯಲಿ ಬೀರಿತು ಹೊಸಸುದ್ದೀ । ಕೇರಿಕೇರಿಯೊಳೆಲ್ಲ ಬಿಡದೆ ॥ ಪಾರಿ
ಬಂದರು ದೂತಿಯರು ಸತ್ರಾಜಿತ ಸುಕು । ಮಾರಿಗ್ಹೇಳಿದರರ್ಥಿಯಲಿ ॥ ೪ ॥

## ರಾಗ ಮುಖಾರಿ, ಅಟತಾಳ.

ಕೊರವಿ ಬಂಧಳಮ್ಮ ಈ ಪುರದೊಳಗೆ । ನೆರದಿದೆ ಜನವೆಲ್ಲವಂ
ದರಿದೀನ ಹೇಳಲಿ ॥ ಪಲ್ಲ ॥ ವಚ್ಚಾರೆಗಂಗಳೋ ಮದನಬಾಣಂ

ಗಾಳಿಯೊ । ಪೆಚ್ಚೀನ ಕುಚತಟವೊ ಸುವರ್ಣಘಟವೊ ॥ ಬೆಚ್ಚಿದಮೃಗ ಮಧ್ಯವೊ ಕಾಣಲಸಾಧ್ಯವೊ । ಅಚ್ಚನೀಲವೇಣಿಯೋ ಅಥವಾ ಕಾಳಾಹಿಫಣಿಯೊ ॥ ೧ ॥ ರೂಪದಲಿ ರತಿಯೊ ಅಥವಾ ಪಾರ್ವತಿಯೋ ಪ್ರ । ತಾಪದಲ್ಲಿ ಸವಿತರಳೊ ಸುಧಾಕರಳೊ ॥ ಆಪುಣ್ಯವಚನದಿ ಶುದ್ಧ ವಾಣಿಯೊ ಬ್ರಹ್ಮಾಣಿಯೊ । ನೂಪುರಕಾಲಾಟದಿ ಊರ್ವಸಿರಂಭೆಯೊ ಸ್ವರ್ಣಬೊಂಬೆಯೊ ॥ ೨ ॥ ಸುಳಿಕುಂತಳವೊ ಅಳಿಗಾಳಪಂಕ್ತಿಯೊ । ಹೊಳವಾ ಹಲ್ಗಳೊ ವಜ್ರದ ಸಾಲ್ಗಳೊ ॥ ತಳಿರಧರವೊ ಅಥವಾ ಮಧುರವೊ । ಇಳೆಯೊಳಿನ್ನಿವಳಾವ ಕೊರವಿಯೊ ಕಲ್ಪತರುವೊ ॥ ೩ ॥

ವಚನ.

ಕೊರವೆಂಬುವ ಸುದ್ದಿಯಕೇಳುತ । ಸರಸಿಜದಳಾಯತಲೋಚನೆ ॥ ಕರೆಕರೆಯೊಂದಟ್ಟಿದಳತಿ ವೇಗದಲಿ। ಪರಿಪರಿದೋಡಿದರಾಳಿಗಳಾವಳಿ ಎರಗುವ ॥ ತೆರದಿಂದರವಿಂದಕೆ ಕೊರವಿಯ ಕರದರು। ಧೊರೆಸಾನಿಯು ಬರ ಹೇಳಿದಳೆಂದು ॥ ೧ ॥ ಗುತ್ತಿಗೆಯಾಳಾದಗೆ ಯದುಪತಿಸುದ್ದಿ ನಾನೇನ್ಹೇಳುವೆ। ವಕ್ಷಿಡಿದಳು ನಮ್ಮೊಡತಿಯು ಸರಿಸವತಿ ॥ ಸುತ್ತಮುತ್ತೆದೆ ಮನ್ಮಥನಾಳುಕುದುರೆ ಶಿವಸತಿ ನೀನೆಂದು । ಸತ್ರಾಜಿತಪುತ್ರಿ ನಿನ್ನನು ಕರೆಸಿದಳೆ ॥ ೨ ॥ ಧೊರೆಸಾನಿಯು ಹೆಸರೇನ್ಹೇಳಲೆ ಧೊರೆಯಾದವನೀದ್ವಾರವತಿ। ಪುರದರಸೆದುವರ ಸಿರಿಕೃಷ್ಣನರ್ಧಾಂಗಿಯುನಿಹದೆ ಎಲೆಲೆ॥ ಧೊರೆಗಳ ಸಂಗವು ನಮಗ್ಯಾತಕೆ ಶುದ್ಧಪತಿವ್ರತೆ ಕೃಷ್ಣ । ಹರಳಿಗಥರವಳ್ಳಿಮಗೆ ॥ ೩ ॥ ಶ್ರೀಃ ॥

ರಾಗ ಮುಖಾರಿ, ತ್ರಿಪುಟತಾಳ.

ಅಂತರವಿನ್ಯಾಕೆ ನಾಸಿಂತಾರದವಳಲ್ಲಾ । ಕಾಂತೆ ನೆನಸಿದಳೆ ನನ್ನ ಕರಿಯಲಟ್ಟಿದಳೆ ॥ ಸಂತೋಷವ್ಯಾತಮ್ಮ ಬಂದಳೆಂತ ನೀ ಹೇಳಮ್ಮ ಬೆಲ್ಲ । ದಂಥಾ ಸಿಂಗಾಪುಟ್ಯಾಯೆನ್ನ ವೊಲೆನುಣ್ಣಾನಮ್ಮ ॥ ಕಬ್ಬು ಕೈಯಲ್ಲಿ ಕೊಟ್ಟರೆ ಕಾರ್ಮುಕವಾ ಮಾಡುವನೂ ಕೈ । ಗಬ್ಬಿದಾ ಕುಸುಮಂಗಳ ಬಾಣವೆಂಬ್ಹೊಡವಾನೂ ॥ ತಬ್ಬಿಬ್ಬಿ ನುಡಿಯಲ್ಲಾ ಶುಕ

ವಾಜಿಯೆಂದೇರುವನು ಇಂ । ತಬ್ಬರದ ಸುತನೆನ್ನಾ ಗರ್ಭದಲ್ಹುಟ್ಟಿದನೂ ॥ ೨ ॥ ಹುಟ್ಟಾವೊದಲು ವೊಲೆಯುಬಿಟ್ಟಾ ನನ್ನ ಕಂದಾ । ಪಟ್ಟಿದರಸಿ ಅಧರವುಂಡಾನಲವಿಂದಾ ॥ ಕೊಟ್ಟಾನೋಡುವೆ ವೊಲೆಯ ಕಾಯುಜನಿವನವ್ವಾ ನಡೆ । ಬಟ್ಟಿಯಾ ತೋರಿಸೆ ಬಾಲೆಯರ ಮನೆಗವ್ವಾ ॥ ೩ ॥ ಶ್ರೀಃ ॥

ರಾಗ ಭೈರವಿ, ಏಕತಾಳ.

ದೇವಕಿಯುದರದಲಿ ಅವತರಿಸಿದ ಶ್ರೀಕೃಷ್ಣಾ । ದೇವತೆಗಳನೆಲ್ಲ ಜನಿಸೆಂದಾ ॥ ಕೋಲುಕೋಲೆನ್ನಾ । ಮುತ್ತಿನ । ಕೋಲುಕೋಲೆನ್ನಾ ॥ ಪಲ್ಲ ॥ ಮುನಿಸಂಕುಲವೆಲ್ಲಾ ಕಾನನತರು ಪಕ್ಷಿಗಳೂ । ಸನಕಾದಿಗಳಾವಿನ ಹಿಂಡಾದರು ॥ ಕೋಲು ॥ ಅನುದಿನ ತಪವಿದ್ದೂ ಜನಿಸಿದರೈ ಸುರರು । ದನುಜಾರಿಯ ಕೂಡಾಡುವ ಗೊಲ್ಲರು ॥ ಕೋಲು ॥ ೧ ॥ ಹುಟ್ಟಿದ ಮಧುರೆಯೊಳೂ । ಬಿಟ್ಟೋಡಿದ ಗೋಕುಲಕೆ ಉ । ತ್ಕೃಷ್ಟನಂದನ ಮನೆಯೊಳಗಾದನು ॥ ಕೋಲು ॥ ಕೊಟ್ಟಳು ವಿಷವೊಲೆಯ ಪೂತನಿ ಕೆಟ್ಟಳುಜಗವರಿಯೆ । ಸೃಷ್ಟೀಶ ನಲಿವುತ ವಲಿವಲಿದಾಡಿದ ॥ ಕೋಲು ॥ ೨ ॥ ಶಕಟನಬಗದೊದೆದೂ ತೃಣಾಸುರ ವಿಕಟತನದಿ ಗೆದ್ದೂ । ತಗಲಿಸಿ ವರಳನು ತರುಗಳ ಮುರಿದಾ ॥ ಕೋಲು ॥ ಬಗೆಯದೆ ಬಕಸುರನಾ ಬಾಗಿಸಿ ಭಯವಿಲ್ಲದೆ ಕೊಂದಾ । ಹಗೆಯುರಗಂಡಸುರರ ಮನೆಕೊಂಡಾ ॥ ಕೋಲು ॥ ೩ ॥ ತುರುಗಾಯುತ ಬರುವಾ ತುರುಗಳ । ನೆರಳಲಿ ಕುಳ್ಳಿರುವಾ । ಸರಿವದ್ದೀಚಿಣಿಚಂಡುಗಳಾಡುವ ॥ ಕೋಲು ॥ ಬಿರಿಹಿಡಿ ಶಂಬೆಗಳಾ । ಬಿರಿಸಿನ ಘನಚಿಣಿಚಂಡುಗಳಾ ॥ ಬಿರಿಸಿಲಿ ಹೊಡವನು ಬುತ್ತಿಯ ಹಿಡಿವನು ॥ ಕೋಲು ॥ ೪ ॥ ಹೊಂಬಣ್ಣೊಸಬೆಳ್ವಾ ಬಾನನ್ನ ತುಂಬಿಕಪಿಲೆಬೋಲ್ಯಾ । ಕೊಂಬಿನ ಚಂಚಾಕರೀ ಚಂಡಾ ॥ ಕೋಲು ॥ ಕೊಂಬುಕೊಳಲನೂದಿ ಬಾಯುಲಿ ರಂಬಿಸಿಸಿಳ್ಳೊಡದೂ । ಅಂಬುಜ ವದನದಿ ಆವುಗಳ ಕೂಗುವ ॥ ಕೋಲು ॥ ೫ ॥ ಅಚ್ಚಕೆಂದಾವರೆ ಬಾರೆಬಾನನ್ನ ಮುಚ್ಚಿದ ಮುಸುಕಾವಿ । ಕೆಚ್ಚಲತುಂಬಿದ ಮುಖಾರವಿಂದಾ ॥ ಕೋಲು ॥ ಅಚ್ಯುತ ಆವುಗಳನು ಹಾದಿಯ । ಹಚ್ಯೋಂದಾವೇರಿ

ಮುಚ್ಚಿಸುತಿದ್ದನು ಕೊಳಲೂದಿ ॥ ಕೋಲು ॥ ೬ ॥ ಫಣೆಯಲ್ಯರಳಿ
ಲೆಯೂ । ಪಾದದಿ । ಝುಣರೆಂಬಂದಿಗೆಯೂ । ಕುಣಿದಾಡುವ ಗೆಜ್ಜೆ ಘಲು
ಘಲುಕೆನುತಲಿ ॥ ಕೋಲು ॥ ಎಣೆಯಿಲ್ಲದ ಚಲುವಾ । ಮಾಣಿಕ । ಮಣಿ
ಯಂದದಿ ಹೊಳವಾ ॥ ಹವಣಗಾರ್ತಿಯರೊಳ್ಳಗಲಿರಳಾಡುವ ॥
ಕೋಲು ॥ ೭ ॥ ಕಾಳಿಂದಿಯ ಧುಮುಕಿ । ಕಾಳಾಹಿಫಣೆ । ತುಳಿದು । ತಾಳ
ಗತಿಯ ನಟನಾಟ್ಯವನಾಡಿದ ॥ ಕೋಲು ॥ ತೋಳದಂಡಿಗೆಮಾಡಿ । ಗೋ
ಪಾಲಕರೊಡಗೂಡಿ । ಕೇಳಿಕೆಮಾಡಿದ ಗೋಕುಲದೊಳಗೆ ॥ ಕೋಲು ॥
॥ ೮ ॥ ಆಲಯಗಳ ಪೊಗುವಾ । ಮೀಸಲ । ಹಾಲುಬೆಣ್ಣೆಯ ಕಳೆವಾ
ಬಾಲೆಯರ್ಹಿಂದಟ್ಟಲು ಸಿಗದೋಡುವ ॥ ಕೋಲು ॥ ಪಾಳತಿಯಲಿ
ಬರುವಾ । ಕರುಗಳ । ಕಣ್ಣಿಗಳನೆ ಬಿಡುವಾ ॥ ಬಾಲಕರನು ಬಡಿದೋಡುವ
ಕಾಡುವ ॥ ಕೋಲು ॥ ೯ ॥ ಶೀರೆಯ ಶೆಳದ್ಯೊವಾ । ಯಮುನಾ ।
ತೀರದ ಕದಮೇರ್ವಾ । ನಾರಿಯರೆಲ್ಲರ ಬತ್ತಲೆಮಾಡುವ ॥ ಕೋಲು ॥
ಮೀರಿದಮಾಸವನಾ । ವರುಷದ । ಹಾರವ ಬಳಿದುಂಡಾಸಂತ । ಧಾರ್ರಿಗೆ
ಗಿರಿಕೊಡೆಮಾಡಿದ ॥ ಕೋಲು ॥ ೧೦ ॥ ಬಿಲ್ಲುಹಬ್ಬಕೆ ಹೋಗಿ । ಮಲ್ಲರ ।
ಹಲ್ಲುಮುರಿದುನೀಗಿ । ಬಲ್ಲಿದ ಕಂಸನ ಮುರಿದಿಟ್ಟಾ ॥ ಕೋಲು ॥ ಉಲ್ಲಾ
ಸದಿ ಹೆತ್ತಾ । ತಾಯಿಯಕಡೆ । ಯಿಲ್ಲದೆ ಬಿಡಿಸೀ । ಸಲ್ಲಿಸಿ ಮುತ್ಯಗೆ ಪಟ್ಟವ
ಗಟ್ಟಿದ ॥ ಕೋಲು ॥ ೧೧ ॥ ದ್ವಾರಕಿಯಲಿ ಬಂದೂ । ಹೆಂಡಿರನಾಯಿದು
ಮದುವ್ಯಾದಾ । ವಾರಿಜನಾಭನ ವಾರ್ತೆಯ ಕೇಳಿದೆ ॥ ಕೋಲು ॥
ದೂರದಿಂದ ಬಂದೆ । ಶೌರಿಯ । ನಾರಿಯಳನು ಕಂಡೆ ॥ ಮೀರಿದಪರಿತೋ
ಷದಿ ನಲಿದಾಡಿದೆ ॥ ಕೋಲುಕೋಲೆನ್ನಾ । ಮುತ್ತಿನ । ಕೋಲುಕೋ
ಲೆನ್ನಾ ॥ ೧೨ ॥ ಶ್ರೀಃ ॥

ರಾಗ ಶಂಕರಾಭರಣ, ಆದಿತಾಳ.

ಬಂದಳೊಲವಿನಲಿ ಬಾಗಿಲೊಳಗಾ । ನಂದದಿಂದಲಿ ಹಾಡುತಾ ।
ಸುಂದರಾಂಗಳೆ ಆರ । ಏಂದಾಗಂಗಾಳೆ ಮುದ್ದು । ಮಂಗಳಪದದಿಂದ ಅಂಗ
ಳವನೆ ಪೊಕ್ಕಳು ॥ ಪಲ್ಲ ॥ ಸೊಲ್ಲುಸೊಲ್ಲಿಗೆ ನಗುತಾ । ಚಲ್ವ । ಮಲ್ಲಿಗೆ
ಝಲ್ಲೀ ಚೆನ್ನಲಿ ವಲಿವುತಾ ॥ ಚಲ್ವಾಧರದ ಬೆಳಗಾಬೆರಳ ತುದಿ । ಯಲ್ಲಿ

ಏರಿಸು ನೋಡುತಾ । ಸಲ್ಲಲಿತದ ಸ್ವರಂಗಳನೆತ್ತುತ । ಹುಲ್ಲೆಗಂಗಳ ನೋಟ ಹೃದಯದೋಳ್ನಾಟಿಸುತ । ಪಲ್ಲವಪಾಣಿಯಲ್ಲಿ ಪುಟ್ಟೇಯುದಿರುವುತ । ನಿಲ್ಲದಾರಡಿ ಕುಸುಮದಲ್ಲಿ ಎರಗಿದಂತೆ ॥ ೧ ॥ ನೃತ್ಯನೃತ್ತದಿಂದಾಡುತಾ ಅಭಿನವಗ । ಕೀರ್ತೀ ಕೈಯಲ್ಲಿ ತೋರುತ್ತಾ । ಸತ್ಯಭಾಮೆಯು ಮನಕೆ ಮಣಿನಸಂಗ । ದುತ್ತ್ವಾಕ ನೋಳದೋರುತ ॥ ಸಪ್ತತಾಳಗಳಿಂದ ಸಂಗವ ಕೂಡುತಾ । ಮುತ್ತಿನ್ಹಾರಗಳೆಲ್ಲ ಉದಂಬದೊಳೊಲವುತ । ಕಸ್ತೂರಿತಿಲಕವ ಫಣಿಯಲ್ಲಿ ಬೆವರುತ । ಮತ್ತಾರವಿಂದಕಾದಿತ್ಯನೆರಗಿದಂತೆ ॥ ೨ ॥ ಮಧುರವಾಕ್ಯನಾಡುತಾ । ಮಾನಿನಿಯುಳ । ಹೃದಯವ ಕಪಡಿಸುತಾ । ಮುದದಿಂದ ಮೊಗನೋಡುತಾ । ತನ್ನೊಳುತಾನೆ ಕಿಲಿಕಿಲಿ ನಸುನಗುತಾ ॥ ಬಿದಂದೆರಳೆಯಂತೆ ಬೆಂಕೊಂಡು ನೋಡುತ । ಸುಪತಿಯು ಮನವೆಲ್ಲ ಸೂರೆಯಮಾಡುತ । ಹುದುಗಿದ ಸಿಂಗನ ಎತ್ತಿ ಮುದ್ದಾಡುತ । ಮಧುರಮಾವಿಗೆ ಶುಕ । ನೊದಗಿದ ಬಗೆಯಂತೆ ॥ ಬಂದಳೊಲವಿನಲಿ ಬಾಗಿಲೊಳಗಾ । ನಂದದಿಂದಲಿ ಪಾಡುತಾ ॥ ೩ ॥

ರಾಗ ಪಾಡಿ, ಕುರಗ ಝಂಪೆತಾಳ.

ವಿರಹತಾಪವು ಹೆಚ್ಚಿತವಮ್ಮಾ ಇವಳೆಲ್ಲಿ । ಕೊರವೆ ಮನ್ಮಥ ಮಸದ ಶರವೆ ಖಳೆಯುವಮ್ಮಾ ॥ ಪಲ್ಲ ॥ ಪುರುಷರಲಿ ಮನವೆರಗಬಹುದೂ ಬೇಕ । ಚಂಸುಕಳು ಚಿತ್ತ ಅಪಹರಿಸುವಳು ಅರಿದು । ಡ್ವಾ । ಹಠದಿಂಕುಮುಹಿ ಮಾಗಬಹುದು । ಹತ್ತುಸಾ । ವಿರಕೆನ್ನ ಮನಸು ಅನ್ಯರಿಗೆರಗದು ॥ ॥ ೧ ॥ ರೂಪುಸರಿಹೆಣ್ಣಾ ನುಡಿಯಲಲ್ಲಾ । ವಾಜ । ಲಾಪೆಯಿದು ಸುಭದ್ರೆಯು ಹೊಳವಿಕೆಲ್ಲಾ । ಕೋಪ ಅತ್ತಿಗೆ ಅಗಳಲ್ಲಾ । ಕೊರವಿಸ್ವ । ರೂಪವೆಂದರೆ ಕಲಾಪ ಬರದಲ್ಲಾ ॥ ೨ ॥ ಯದುರಾಜನಾಗನಲ್ಲೆವಮ್ಮಾ । ವಡನರದವ ಕಾಹರೆಕಂಗ । ಳದೆ ಪೋಲ್ವಪೆವಮ್ಮಾ । ಹಪುರಚದುರವು ಬಲ್ಲನವಮ್ಮಾ ಯುವತ್ಯಾಗಿ । ಸುಧೆಸ್ತ್ರಪಂಚದಿ ತ್ರಿದಶರಿಗೊಲಿದನವಮ್ಮಾ ॥ ॥ ೩ ॥ ಸಕಲಮಾಯವು ಬಲ್ಲನಲ್ಲೆ । ಹೆಣ್ಣಾಗಿ । ವ್ಯಕನುಕಾಯಿಸಿ ತ್ರಿಯಂಬಕನುಳುಹಲಿಲ್ಲೆ । ಪ್ರಕಟಿಸಿದಕೊರವಿ ಇವನಲ್ಲೆ । ಅಕಟ । ವಿಕಟಚರಿತಕೆ

ವಿಸ್ಮಿತಳಾದೆನಲ್ಲೆ ॥ ೪ ॥ ನಗೆಗೇಡಿದೇಸ್ಥೋಳಲವ್ವಾ। ಎನ್ನಕುಚ। ಯುಗ ದಲ್ಲಿ ರೋಮಾಂಚನವು ನೋಡವ್ವಾ॥ ಮೊಗವ್ಯಾಕೆ ಕಿಂಬೆವಂದವ್ವಾ। ನುಡಿಯುಡುಗಿ। ಜಘನವೆರಡ್ಯಾಕೆ ಗದಗದಿಸಬೇಕವ್ವಾ॥ ೫ ॥ ತೋರು ತದೆ ಕಪಟಕೊರವೆಂದು। ಮುಂದೆ। ದಾರುಬಲ್ಲರು ಇದೇಮಾತು ನಿಜ ವೆಂದೂ ॥ ಭಾರಿಜತನನೀಸುದ್ದಿವಂದು। ಅನ್ಯರಿಗೆ। ತೋರಲಾಗದು ನಿನ್ನ ಮನದೊಳಿರಲೆಂದು ॥ ೬ ॥ ನುಡಿಸಿ ನೋಡುವೆನು ಸಂದೇಹ। ಕೆಡಿಸು। ವದು ಆತ್ಮವನು ಆದರಿಂದಕೇನೂ ॥ ನಡವುಡೊಂಕೆತ್ತಾದರೇನೂ। ಕಾವ ಡಿಯು। ಥಡಿಸೇರಿಮುನೆಗೆಬರಿ ಸಾಕು ತಪ್ಪೇನು ॥ ೭ ॥ ಶ್ರೀಃ ॥

## ವಚನ.

ಧನ್ಯಳಾದೆನೆ ಕೊರವಿ ನಿನ್ನ ರೂಪವ ಕಂಡು। ರನ್ನೆಶಿವಸತಿ ನೀನೆಂದು ಕರಸಿದೆನೆ॥ ನೆನಸಿಕೊಂಬೆನೆಯೆನ್ನ ಮನದೊಳಿದ್ದದು ಹೇಳೆ। ಘನತರ ಕಬರಿವೃತ್ತಕುಚ ಹೊನ್ನಬೊಗರಿ ॥ ಪತಿಯೆ ಪರದೇವತೆಯು ಪತಿ ಯಿಂದಲ್ಲೈದೆಘನ। ಪತಿಯಿಂದ ಸೌಭಾಗ್ಯ ಪತಿಯಿಂದಲಾತ್ಮಸುಖ॥ ಪತಿ ಯಿಂದ ಶೃಂಗಾರ ಪತಿಯೆಗತಿ ಜೀವಕ್ಕೆ। ಪತಿಯೆಹಿತ ದೇಹಕ್ಕೆ ಪತಿಯಿಂ ದಲೇ ಪ್ರಜಾ॥ ವಂತಿ ಸೀಮಂತಿ ಶೃಂಗಾರವಂತಿ। ಪತಿಗಾಗಿ ಆತ್ಮಬಂಧು ಗಳ ಬಿಡುವರು ಮತ್ತಾ। ಪತಿಗಾಗಿ ಹೆತ್ತವರ ಜರಿದು ಕಳೆಯುವರು ॥ ಆತ್ಮಪತಿಹಳಿಯೆ ಯಜ್ಞದೊಳು ಧುಮುಕಿದಳು ಮಹಾ। ಪತಿವ್ರತೆಯು ದಕ್ಷಪ್ರಜೇಶ್ವರನ ತನೂದ್ಭವೆಯು ॥ ಪತಿಗಾಗಿ ಅರಣ್ಯವಾಸಿಯಾದಳು ಸೀತೆ। ಪತಿಗಾಗಿ ಸೈಕೇಂದ್ರಿಯಾದಳು ದ್ರುಪದತನುಜೆ॥ ಪತಿಯನೊಲಿ ಸದ ಹೆಣ್ಣು ಮಣ್ಣುಪಾಲಾಗಲಿ। ಪತಿಯಿಂದಧಿಕರಿಲ್ಲ ಪೃಥ್ವಿಯೊಳಗಿಲ್ಲ॥ ಪತಿಯೊಲ್ಲದಾ ಯುವತಿ ಪಾಷಾಣವಲ್ಲದೆ। ಕೇಳಿಬಲ್ಲೆಯಾ ಕೊರವಿ ನೀ ನರಿಯುವಿ ॥ ಪತಿಗೆ ಊಡಿದಳೊಲವುಮದ್ದು ಎನ್ನಯ ಸವತಿ। ಪತಿ ಪರಾಧೀನನಾದನೆ ಯಾಕೆ ಯುವತಿ ॥ ಪತಿಯವಳ ಬಿಟ್ಟಗಲಲೊಲ್ಲ ಅರಿಘಳಿಗೆ। ಪತಿಯ ಕಟ್ಟ್ಯಾಕಿದಳು ಮೋಹಪಾಶದಲಿ ॥ ನಗೆಯೆಂಬ ಮಲ್ಲಿಗೆಯ ಮಚ್ಚುಚಲ್ಲಿದಳು ಕುಚ। ಯುಗಜಂಬೀರಗಳಿಂದ ಕಟ್ಟು

ಕಟ್ಟಿದಳು ॥ ಅಧರ ಮಧುರವ ಕುಡಿಸಿ ಮದವೇರಿಸಿದಳು । ಬದಿಯುಗ ಲದಂತೆ ಭಾಷೆಯ ಕೊಂಡಳಂತೆ॥ ಪತಿವಿವರ್ಣವ ವರ್ಣಿಸಿ ಕೇಳಿದ್ಯಲ್ಲೆ। ಪತಿಯುಗಲಿದ್ದೀದೇಹ ಹೆಮ್ಮರ ನೀಬಲ್ಲೆ ॥ ಸತಿಕೇಳೆ ನೀನಾವದೇಶದೊ ಳಗಿರುವೆ । ಪತಿಯಾರು ನೀನಾವಜನಪದದ ಕೊರವೆ ॥ ಶ್ರೀಃ ॥

## ರಾಗ ಯರಕಲಕಾಂಬೋಧಿ, ಅಟತಾಳ.

ಗಂಡ ನನಗಿಲ್ಲಾವೆ । ಹೆಂಡರನಾಳ್ವ ॥ ಪಲ್ಲ ॥ ಗಂಡುಗಾದೇವಿ ನಾರಾ ಯಣೆಂಬೊರು ನನ್ನಾ ॥ ಥಂಡಥಂಡದ ದೇವದೈತ್ಯರ ಕಯ್ಯಾಪೂಜೆ । ಗೊಂಡ ಹೆಂಗಳಗಾಡಿಗಾರ್ತಿ ಕೊರವಂಜಿ ನಾನೂ ॥ ೧ ॥ ಬೊಮ್ಮ ನನ್ನ ಮನೆಯಾ ವಮ್ಮನದ್ದಿರಿಯಾನು । ಹವಿಮ್ಮಾನಾಜೀತದಾಳು ಹನು ಮಾಗೆ ನವವಿಧ । ಹೊನ್ನನೆನಿಸಿಕೊಟ್ಟು ಹೊಂದಿಸಿ ದೇವತಾವನೂ । ಉಮಾಪತಿಯು ಎನ್ನಾ ಮೊಮ್ಮಗನೆ ಮೋಹಿನಿ ॥ ೨ ॥ ಲಚ್ಚೀಯೆಂ ಬೊವಳೆನ್ನಾ ಹೆಚ್ಚಿನಾಪರಿಚಾರಿ । ಕಚ್ಚಾಲಂಜೂವಾದೆನ್ನಾ ಅಚ್ಚಬೆಳ್ಳ ಹಿಬೆನ್ನಾ । ನಿಚ್ಚಾಹಾಸಿಕೆಮಾಡಿ ಬೆಚ್ಚಾದೆ ಮಲಗೂವೆ । ಇಚ್ಛೆಬಂದಲ್ಲಿ ಪಕ್ಷಿಯನೇರಿ ತಿರುಗುವೆ ॥ ೩ ॥ ಹಾಲುಹಳ್ಳದೊಳೆನ್ನಾ ಮನೆಯುಂಟು ಅನಂತ । ಶಾಲೆಯೊಳಗೆ ಈಡುವುಂಟು ಸಟೆಗಳಲ್ಲಾ ॥ ಮೇಲೆ ಭಾಗ ದೊಳು ಆಳುವಿಲ್ಲಾದರಮನೆ । ಪಾಲೂಬೇಡುವಂಥಾ ದಾಯಾದ್ಯಾ ರೆನಗಿಲ್ಲ ॥ ೪ ॥ ನಿದ್ದೆಬಂದಲ್ಲಿ ಯೋಗನಿದ್ರೆಯುಮಾಡುವೆ । ಸುದ್ದಿತರ ಲೊಬ್ಬ ಉದ್ಧವಯೆನಗುಂಟು ॥ ಕದ್ದುಮಾಜುವಳಲ್ಲಾ ಕರದವಾರಲಿ ಯುಂಬೆ । ಸಿದ್ಧಿಸಿಕೇಳೆನ್ನಾ ಸೊಲ್ಲುಪೇಳುವೆನೆಲ್ಲಾ ॥ ೫ ॥ ಶ್ರೀಃ ॥

## ವಚನ.

ಥಳಥಳಿಪ ಹೊಟ್ಟೆಯುವಳೆ । ತಾವರೆಮೊಗವವಳೆ । ಬಳ್ಳಬಳುಕುವವುಂಗ್ರ । ನಡುವಿನೊಯ್ಯಾರಿ ॥ ಡೊಂಕದುರುಬಿನಹರದಿ । ಶಂಖಕೊರಳವಧೂಟಿ । ಪಂಕೇರುಹಪಾಣಿ ಪಟು । ತರದ ಶುಕವಾಣಿ ॥ ತೊಂಡೆಪಣ್ದುಟಿ ಬಾಲೆ । ದಿಂಡುದೋಳಿನ ಹೆಣ್ಣು । ಮಿಂಡೆವೆಗ್ಗಳೆ ಮದ್ದು । ಗುಲುಕುವನಾಡಿ ॥

ಸುಲಿಪಲ್ಲ ಸೊಬಗೆ ಸಂ। ಪಿಗೆವೊಲ್ಲೆ ಮೂಗಿನಲಿ। ನಲಿವ ಹುರುಮಂಜು। ಮುತ್ತಿನ ಮುರುಕಲಾಡಿ ॥ ಗುರುಕುಚದ್ವಯದ ಭಾರಕೆ ಬಾಗಿದ । ಗುಜ್ಜಿ । ಸ್ಮರನ ಕಾರ್ಮುಕ ಭ್ರೂ। ಲತೆ ನೀಲಕುಂತಳೆಯು ॥ ಥಳಥಳಿಸುವ ಕಪೋಲೆ। ಹೊಳೆವ ಚಂಪಕಮಾಲೆ। ಎಳೆವಳ್ಳಿಪೋಲ್ವ ಮೃದು। ತನು ವೊಳಕೆನಗೆಯುವಳೆ ॥ ಬೆದರಿದ ಕುರಂಗಾಕ್ಷಿ। ಮದನಕದನಾಪೇಕ್ಷಿ। ಎದುರಿಲ್ಲ ನಿನ್ನ ಸೌಂ। ದರ್ಯಕೇನೆಂಬೆ ॥ ನಿನ್ನ ಪುಟ್ಟಿಸಿದ ಬ್ರಹ್ಮನೆ ಬ್ರಹ್ಮ ಉದರದಲಿ। ಹೆತ್ತತಾಯಿ ಧನ್ಯಳು ಸತ್ರಾಜಿತಕುವರೀ ॥ ನಿನ್ನ ಪುರುಷನೆ ಪರಮಪುರುಷ । ನಿನ್ನ ಕಡೆಗಣ್ಣನೋಟಕವನೇ ಪಾತ್ರ ॥ ನಿನ್ನ ಸರಿಗಾಣೆ ಹೆಂಗಳೆಯರೊಳಗೇ। ಮೂರ್ಲೋಕದೊಳಗೆ। ನಿನ್ನ ಮೆಚ್ಚಿದೆ ಮೆಚ್ಚಿದೆನೇಳು ಅಂಬುಜಾಕ್ಷಿ ॥ ನೀನಿದ್ದ ಅರಣ್ಯ ಅತಿಶಯದ ಸಾಮ್ರಾಜ್ಯ । ನೀನಿದ್ದ ದ್ವಾರಾವತಿ ಅಮರಾವತಿಗಿಂದಧಿಕ ॥ ನೀನೆ ಜಯವಂತಿ ಸೀಮಂತಿ ಶೃಂಗಾರವಂತಿ। ನಿನ್ನ ಮನಕೆಬಂದಂತೆ ಕೇಳೆ ಕಾಂತೆ॥ ಬಿಡು ನಿನ್ನ ಮನದ ವೈಕ್ಲಬ್ಯ ಹೇಳುವೆನೆಲ್ಲಾ। ನಡೆತಾರೆ ಮಂಚದಿಂದಿಳಿ ಅಂಚೆಗಮನೆ ॥ ಸಾಮುದ್ರಿಕೆ ಬಲ್ಲೆ ಶಕುನವ ಹೇಳಬಲ್ಲೆ । ಪ್ರೇಮದಿಂದ ಬಿಟ್ಟ ಗಂಡನ ವಲಿಸಿಕೊಡಬಲ್ಲೆ ॥ ವೃದ್ಧ ಯವ್ವನವ ಅಭಿವೃದ್ಧಿಮಾಡಲು ಬಲ್ಲೆ । ಪೊದ್ದುಶೀರಿಸಿ ವಲಿಸುವಮದ್ದುಗಳ ಬಲ್ಲೆ ॥ ಹುಟ್ಟಬಂಜೆಗೆಧಿಟ್ಟ। ಮಕ್ಕಳನು ಕೊಡಬಲ್ಲೆ । ಕೆಟ್ಟಸವತಿಯ ಬಾಯಕಟ್ಟಲು ಬಲ್ಲೆ॥ ಲಗ್ನಹಿಡಿಯಲು ಬಲ್ಲೆ ನವಗ್ರಹ ಯಂತ್ರಗಳು ಬಲ್ಲೆ। ಶೀಘ್ರಫಲವೀವ ಗಭಾಡಮೂಹೂರ್ತಗಳ ಬಲ್ಲೆ॥ ಆನಂದಯೋಗಗಳ ಆಯುಷ್ಯ ಕೊಡಬಲ್ಲೆ। ಸ್ವಾನಂದಗಳ ಕೊಡುವ ಧೂರ್ತಲಕ್ಷಣ ಬಲ್ಲೆ ॥ ಹಕ್ಕಿಶಕುನವು ಬಲ್ಲೆ ಪಕ್ಷಿವ್ಯಾಖ್ಯೆಯು ಬಲ್ಲೆ। ಯಕ್ಕೆಬೆನಕುಂಟು ನೆನಸಿಕೊ ಹೇಳಲು ಬಲ್ಲೆ॥ ಚಿಂತಾಮಣಿ ಬಲ್ಲೆ ಚಿಲ್ಲರಹೊತ್ತಿಗೆ ಬಲ್ಲೆ ನಿ। ರಂತರ ಬಲವು ಪೇಳ್ವ ಜ್ಯೋತಿಷ್ಯ ಬಲ್ಲೆ॥ ಕಪ್ಪನಿಡಬಲ್ಲೆ ಕೃಜಾಳಕವ ಬಲ್ಲೆ । ತಪ್ಪದಲೆ ಭೇತಾಳನೊಶಮಾಡಿಕೊಡಬಲ್ಲೆ ॥ ಸಹದೇವ ಎನ್ನ ದಾಸರದಾಸ ಸಂಜೆಯನು। ದಯಾದ್ರೀಶನಂತಾದ್ರೀಶನು ಎನ್ನ। ಶಿಷ್ಯರೊಳಗವನೊಬ್ಬ ॥ ಆಕಾಶವಾಣಿಯು। ನ್ನಾಶ್ರಿತಳು ಬೇಕಾದ। ರಿನಮಾತು

ಭಯಭಕ್ತಿಯಲಿ ಕೇಳೆ ॥ ನಾಡಾಡ ಕೊರವ್ನಲ್ಲ ನಿರ್ಮಳಾತ್ಮಳೆ ನಾನು । ರೂಢಿಯೊಳು ಶಿವಸತಿಯರ ಗಂಟಲಗಾಣ ॥ ತಿರುತಿಂಬೊ ಕೊರವ್ಯಲ್ಲ ತಿಂಡಿಯಾಶೆಯೆನಗಿಲ್ಲ । ಬರಲೊರಲಿ ಓರ್ವರನು ವಸ್ತ್ರಬೇಡುವಳಲ್ಲ ॥ ಖರೆಯುಬಂದರೆ ಮಾತು ಶರದುಕೊಡು ತೋರಿದ್ದು । ಧೊರೆಸಾನಿಯಾ ತರಲಿ ಕೊರತೆಯೆನಗಿಲ್ಲ ॥ ಪರರುಕಾರ್ಥಕೆ ವೇಷಧರಿಸಿ ತಿರುಗುವೆ ನಾನು । ಸ್ಥಿರವಾಗಿ ಒಂದುಕಡೆಯಿರುವ ಕೊರವ್ಯಲ್ಲ ॥ ಬೇಸರದೆ ಕೇಳಿದರೆ ಕೊನೆತನಕ ಹೇಳುವೆನು । ಏಸುದೇಶವನೆಲ್ಲ ತಿರಿಗಿ ಬಂದದನೂ ॥

ರಾಗ ಪೂರ್ವಿ, ಆದಿತಾಳ.

ಇಳಾವರ್ತಖಂಡದಾತಳವು ನೀ ಕೇಳೆ । ಅಳಿಯೆ ಮುವ್ವತ್ತುನಾಲ್ಕು ಸಾವಿರದಡ್ಡಗಲೆ ॥ ಒಳಗೆ ಮೇರುವುನ್ನತೊಂದುಲಕ್ಷ ಗಾವುದವೂ । ನೆಲದೊಳಗೆ ಹುದುಗಿಹುದು ಹದಿನಾರುಸಾವಿರವೂ ॥ ೧ ॥ ಎಂಭತ್ತುನಾಲ್ಕುಸಾವಿರ ಅಂಬರದಮೇಲೆ । ತುಂಬ ಮೂವತ್ತೆರಡುಸಾವಿರದಡ್ಡಗಲೆ ॥ ಅಂಬುರುಹಾಸನ ಮನೆಯು ಹತ್ತುಸಾವಿರವೂ ಬೇ । ಕೆಂಬರಾಜಬೀದಿಯಲ್ಲಿ ಎರಡುಸಾವಿರವೂ ॥ ೨ ॥ ಇಂದ್ರಗೆರಡುಸಾವಿರವು ಇಂಬುಪೂರ್ವದಲ್ಲಿ । ಅಂದದಗ್ನಿ ದಿಕ್ಪಾಲಕಗೆ ಅದರಷ್ಟು ಕೇಳ್ವಲ್ಲಿ ॥ ಮುಂದೆ ಕಾಲನರಮನೆಯ ದಕ್ಷಿಣದಿಗ್ಭಾಗಾ । ಒಂದೆ ಅಳತೆ ಹೆಚ್ಚು ಕುಂದಿಲ್ಲ ಕೇಳೆ ಈಗಾ ॥ ೩ ॥ ನೈಋುತನಾಮನೆಯು ಕೇಳು ಅದರ ಸಂಪದಲಿ । ವರುಣನಾಲಯವುಂಟು ಪಶ್ಚಿಮದಿಕ್ಕಿನಲಿ ॥ ತರಳೆ ಕೇಳು ನೀನು ವಾಯುವಿನ ಬಳಿಯಲ್ಲಿ । ಮೆರವ ಉತ್ತರದಿಕ್ಕಿನಲಿ ಧನಪತಿ ಮನೆಯಲ್ಲಿ ॥ ೪ ॥ ಇಂದ್ರಧನಪತಿಯ ಮಧ್ಯ ಈಶಾನಗೇಹವದು । ಹೊಂದಿ ರಾಜಿಸುವರಲ್ಲಿ ಅಷ್ಟದಿಕ್ಪಾಲಕರೂ ॥ ಮುಂದೆ ಕೇಳು ಮೇರುವಿನ ಉತ್ತರಭಾಗದಲೆ । ಚಂದದ ಪರ್ವತಂಗಳು ಛಲ್ವಖಂಡಗಳೆ ॥ ೫ ॥ ನೀಲಪರ್ವತಕ್ಕತ್ತು ಗಾವುದೆರಡುಸಾವಿರವು । ಮೇಲಾದ ರಮ್ಯಖಂಡ ಒಂಭತ್ತುಸಾವಿರವೂ ॥ ಆಲಿಸೆ ನೀ ಶ್ವೇತ ಪರ್ವತದರಮುಂದಲತ್ತಾ । ಚಾಲಿ ಹಿರಣ್ಮಯದ ಖಂಡವತ್ತತ್ತಾ ॥

॥ ೬ ॥ ಶೃಂಗವಾನ ಪರ್ವತದರಸಂಗಳುರುಖಂಡಾ । ಹಿಂಗದೊಂ
ದೇ ಅಳತೆ ಹೇಳಲ್ಯಾಕೆ ಥಂಡಥಂಡಾ ॥ ಮಂಗಳವಂತಿ ಮೇರು
ವಿನ ಪೂರ್ವದಿ ಉದ್ದಂಡ । ಗಂಧಮಾದನಪರ್ವತ ಭದ್ರಾಶ್ವಖಂಡ ॥
॥ ೭ ॥ ಪರ್ವತೆರಡುಸಾವಿರವು ಖಂಡ ಮುವ್ವತ್ತೊಂದು । ಸರ್ವದಾ
ಹುಸಿಯಲ್ಲ ಕೇಳು ದಕ್ಷಿಣದ ಸಂದೂ ॥ ಅರಿದುಕೊಳ್ಳಿ ನಿಷಧಪ
ರ್ವತ ಹರಿವರುಷದ ಖಂಡ । ಸರಸಹೇಮಕೂಟವಲ್ಲಿ ಕಿಂಪುರುಷದ
ಖಂಡಾ ॥ ೮ ॥ ಇತ್ತಲ್ಹಿಮಾಲಯು ಕೇಳಿ ಮತ್ತೆ ಭರತಖಂಡಾ ।
ಉತ್ತರದಿಗ್ಭಾಗದಂತೆ ಅದರ ಅಳತೆಕಂಡ್ಯಾ ॥ ಸತ್ಯ ಪಶ್ಚಿಮಕ್ಕೆ ಮಾಲ್ಯ
ವಾನಪರ್ವತವು ಅದ । ರ್ಹತ್ತೆಕೇತುಮಾಲ ಪೂರ್ವಕ್ಕೆ ಗಂಧಮಾದ
ನವು ॥ ೯ ॥ ಜಂಬುದ್ವೀಪ ಲಕ್ಷಯೋಜನಂಬುಜಾಕ್ಷಿ ಕೇಳಿ ಲವ।
ಣಾಂಬುರಾಶಿಸುತ್ತಲಕ್ಷ ಕಂಬುಕಂಧರಳೆ ॥ ಪ್ಲಕ್ಷನೆರಡುಲಕ್ಷ ಸುತ್ತಾ
ಇಕ್ಷುಸಮುದ್ರ ನಾಲ್ಕು। ಲಕ್ಷ ಕುಶದ್ವೀಪಸುರೋದಕ ಸಮುದ್ರಾ ॥ ೧೦ ॥
ದ್ವೀಪಕ್ರೌಂಚ ಅಷ್ಟಲಕ್ಷ ಯೋಜನದ ಠಾವೂ । ಭಾಪುರೇಸರ್ಪಿ ಅದ
ರಷ್ಟು ಭಾಜನವು ॥ ದ್ವೀಪಶಾಕನಾಮಾ ಸುತ್ತಾ ಏಕದಧಿಸಮುದ್ರಾ।
ಈಪರಿಮಿತ ಹದಿನಾರುಲಕ್ಷವಿಪ್ಪಭದ್ರಾ ॥ ೧೧ ॥ ಶಾಲ್ಮಲೀಯಾದ್ವೀಪ
ಸುತ್ತ ಪಾಲ್ಗಡಲಲ್ಲಾ ಮೇನೆ । ವಿಶಾಲಾಕ್ಷಿ ಮೂವತ್ತೆರಡುಲಕ್ಷ ಗಾವು
ದಾನೆ ॥ ಹರಿಯ ಮಂದಿರದೊಳಾಗೆ ಹರವಿಪ್ಪತ್ತುಲಕ್ಷಾ । ಸಿರಿಭಾ
ಗವೆಂಟು ಭೂದುರ್ಗ್ಹನ್ನೆರಡುಲಕ್ಷ ॥ ೧೨ ॥ ಪುಷ್ಕರ ಅರವತ್ತುನಾಲ್ಕು
ಲಕ್ಷ ಗಾವುದವೂ ತಿ । ರಸ್ಕರಿಸಬೇಡ ಶುದ್ಧೋದಕವಷ್ಟೆ ಠಾವು ॥
ಸ್ವರ್ಣಭೂಮಿ ಸುತ್ತಮುತ್ತ ಶುದ್ಧಉದಕಕ್ಕೆ ವಿ । ವರ್ಣಿಸಿತೊಂಭತ್ತಾ
ರುಲಕ್ಷಾ ನೇಮಪಕ್ಕೆ ॥ ೧೩ ॥ ದ್ವೀಪಸಮುದ್ರ ಸುವರ್ಣಭೂಮಿ
ಯಲ್ಲಾ । ವ್ಯಾಪಿಸಿದ್ದು ಮೂರುವರೆಕೋಟಿಯಾಯಿತಲ್ಲಾ ॥ ಲೋಕಾ
ಲೋಕ ಪರ್ವತವು ಅರ್ಧಕೋಟಿಯಲ್ಲಾ । ಸಾಕುಸಾಕು ತಮಸು
ಏಳುಕೋಟಿ ಅದುಹೊಲ್ಲಾ ॥ ೧೪ ॥ ಘನೋದಕ ಹದಿನಾಲ್ಕುಕೋಟಿ
ಇರೋದಲ್ಲಿ । ಅನಂತಾಸನವು ಮೂರುಲಕ್ಷಗಾವದನಲ್ಲಿ ॥ ಎತ್ತನೋಡಿ
ದಾಶೆ ಕೇಳಿ ಇಪ್ಪತ್ತೈದುಕೋಟಿ । ಐವತುಕೋಟಿ ಬ್ರಹ್ಮಾಂಡದ ವಿಸ್ತಾರ

ವಧೂಟಿ ॥ ೧೫ ॥ ಕೆಳಗಿನೇಳುಲೋಕಗಳ ತಿರಿಗಿಬಂದ । ಬಳಿವಿಡಿದುಕೇಳೆ ತಿದ್ದಿಸಿ ಅದನು ಹೇಳಬಲ್ಲೆ ॥ ಅತಳವಿತಳ ಸುತಳತಳಾತಳವು ರಸಾತಳವೂ । ಅತುಳಮತಿಯೆ ಕೇಳು ಮಹಾತಳವು ಪಾತಾಳವೂ ॥ ॥ ೧೬ ॥ ವಿಸ್ತರಿಸುವೆನು ಏಳುಲೋಕವೂರ್ಧ್ವಾನೇಕಾ ಪ್ರ । ಶಸ್ತಭೂಲೋಕ ಭುವರ್ಲೋಕಾಸುವರ್ಲೋಕಾ ॥ ಮತ್ತೆಮೇಲೆ ಮಹರ್ಲೋಕದತ್ತ ಜನೋಲೋಕಾ । ಅರ್ಥಿಯಿಂದಾ ಕೇಳೆ ತಪೋಲೋಕ ಸತ್ಯಲೋಕಾ ॥ ೧೭ ॥ ಈಥರದ ಲೋಕಂಗಳ ಸುತ್ತಿಬಂದೆನಲ್ಲೇ ಮೇ । ಲಿತ್ತ ಭೂಮಂಡಲದಾ ವಿಸ್ತಾರವು ಬಲ್ಲೆ ॥ ಅಷ್ಟದಿಗ್ಗಜಗಳುಂಟು ದಿಕ್ಕಿಲೊಂದೊಂದೂ । ಮುಟ್ಟಿಕೇಳೆ ಹಸ್ತಿಗಳ ಪೆಸರನೊಂದೊಂದು ॥ ೧೮ ॥ ಐರಾವತವೆಂಬಗಜ ಇಂದ್ರದಿಕ್ಕಿನಲಿ । ವೈಶ್ವಾನರದಿಕ್ಕಿಗೆ ಪುಂಡರೀಕವಲ್ಲಿ ॥ ಯಮನಾಳುವಾದಿಕ್ಕಿನಲ್ಲಿ ವಾಮನೆಂಬನಾಗಾ । ಕುಮುದಾವೆಂಬ ಕರಿಯೂ ನೈಋತಿಯ ದಿಗ್ಭಾಗಾ ॥ ೧೯ ॥ ಅಪರದಿಗ್ಭಾಗದಲ್ಲಿ ಅಂಜನಾಭನೆಂಬ ಗಜವೂ । ಚಪಳೆ ಭೋಗಾವತಿ ಗಂಡನಲ್ಲಿಗಧಿಕನಿಜವೂ ॥ ವಾಯುವಿನ ದಿಕ್ಕಿನಲಿ ವರುಣ ಪುಷ್ಪದಂತ । ಸಾರ್ವಭೌಮಗಜಯಿರೋದು ಸತ್ಯ ದಿಗಂತಾ ॥ ೨೦ ॥ ಈಶಾನ್ಯದಿಕ್ಕಿನಲ್ಲಿದ್ದ ಆಸುಪ್ರತೀಕವು । ಭಾಸುರಾಂಗಿ ಕೇಳೆ ಮುಂದೆ ಅಷ್ಟಪುರಿಯಾತಃವೂ ॥ ಅಮರಾವತಿ ಅಲ್ಲಿಂದತ್ತ ಅಂಭೋವತಿಗ್ರಾಮ । ಕ್ರಮದಿಂದ ಸೈನಾವತಿಯು ಸಿದ್ಧಾವತಿ ನೇಮಾ ॥ ೨೧ ॥ ಗಂಧರ್ವವತಿಯು ಕಾಂಚನಾವತಿಯು ಆಳಕಾವತಿಯ ಪರಿಯಾ । ಮಾಂದಳಿರದುಟಿಯೆ ಯಶೋವತಿಯೂ ಪುಣ್ಯವತಿಯೂ ॥ ಶಶಿಮುಖಿಯೆ ಕೇಳೆ ದಶಾರಣ್ಯಗಳನೆಲ್ಲಾ । ಪಸರಿಸಿ ನಾ ತಿರಿಗಿಬಂದೆ ಪುಸಿಯನಾಡುವಳಲ್ಲಾ ॥ ೨೨ ॥ ಮೊದಲು ದಂಡಕಾರಣ್ಯ ಬದಿಯ ವಿದ್ಯಾರಣ್ಯಾ । ತುದಿಮೊದಲು ನೋಡಿಬಂದೆ ಇಕ್ಷುವಿನಾರಣ್ಯ ॥ ಬದರಿಕಾರಣ್ಯವಳ್ಳಿ ಕದಳಿಕಾರಣ್ಯಾ । ಮುದದಿಂದ ನಾಸುತ್ತಿಬಂದೆ ಚಂಪಕಾರಣ್ಯಾ ॥ ೨೩ ॥ ಹರುಷದಿಂದ ಚರಿಸಿಬಂದೆನಹುಷದಾರಣ್ಯಾ । ಸರಸಿಜಾಕ್ಷಸರಸಿ ಕೇಳೆ ನೈಮಿಷಾರಣ್ಯಾ ॥ ಅರ್ಥಿಯಿಂದ ಗುಹ್ಯಾರಣ್ಯ ಮತ್ತೆ ದೇವಾರಣ್ಯಾ । ಹೆತ್ತ

ಕಂದನಾಣೆತಿರುಗುತ್ತ ಬಂದೆ ಜಾಣೆ ॥ ೨೪ ॥ ಚಪ್ಪನ್ನದೇಶವನ್ನು ಚರಿಸಿ ಬಂಡೆನಲ್ಲೆ । ತಪ್ಪದಲೆ ಹೇಳುವೆನು ಹೆಸರು ಕೇಳೆನಲ್ಲೆ ॥ ಅಂಗವಂಗ ಕಳಿಂಗ ಕಾಶ್ಮೀರಾ । ಕಂಗಳಿಗೆ ಸೌಖ್ಯಕಾಂಭೋಜ ಸಂವೀರಾ ॥ ॥ ೨೫ ॥ ಶೃಂಗಾರಾ ಸೌರಾಷ್ಟ್ರ ಮಹರಾಷ್ಟ್ರವು ಕೇಳಾ ವು । ಶೃಂಗ ಪಯೋಧರೆ ಮಗಧ ಮಾಳವ ನೇಪಾಳಾ ॥ ಚೋಳ ಪಾಂಚಾಲಾ ಗೌಳ ಮಳೆಯಾಳವುಗಡ । ಕಾಳಾಹಿವೇಣಿಯೆ ಮತ್ತೆ ಸಿಹ್ಯದ್ರಾವಿಡಾ ॥ ೨೬ ॥ ಲೋಲೇಕರ್ನಾಟಾ ವೈರಾಟಾ ಕರಹಾಟಾ । ಆಲಿಸಿ ಕಿವಿಗೊಟ್ಟು ಕೇಳೆ ಪಾಂಡ್ಯ ಪನಹಾಟಾ ॥ ಅಲ್ಲಿಂದ ಪುಳಿಂದ ದ್ರಾವಿಡದೇಶ ಕುರುಭೋಜಾ । ವಲ್ಲಾಭೆ ನೋಡಿದೆ ಬಾಲ್ಯಗಾಂಧಾರದ ರಾಜ್ಯಾ ॥ ೨೭ ॥ ಹುಲ್ಲೆಗಂಗಳೆ ವಿದೇಹಾಬಾಹ್ಲಿಕವಿದರ್ಭಾ । ಸೊಲ್ಲು ಕೇಳೆ ಬರ್ಬರಕಿರಾತ ಕುಂತಳಸರ್ಬಾ ॥ ಸೌರಾಷ್ಟ್ರಕೈಕೆಯಮಾಳಂ ಸಾಳಾ ಕೋ[illegible]ಟಂಕಣಾ । ವಾರಿಜಾಕ್ಷಿ ಕೊಂಕಣ ಸೈಂಧವ ಮತ್ಸ್ಯ ಕಾಣಾ ॥ ೨೮ ॥ ನೀರಾ[illegible]ಯು ಎನಗೆ ಶಂಕರದೇಶವಾಗಾವಂದಾ । ನಾರಿ ಸೈಂಧವ ಯವ್ವನಜ್ವಾಲಾಂಧ್ರ ॥ ಸಾಲ್ವಸ್ವೇದ ಸಿದ್ಧಾವತಿಯು ನೋಡಿದೆನೊಂದೊಂದೆ । ಮೇಲಿದ್ದಾ ದೇಶಗಳೆಲ್ಲ ಮೆಟ್ಟಿ ನಾನು ಬಂದೆ ॥ ॥ ೨೯ ॥ ಹೇಳಿದಂಥ ಮಾತುಗಳು ಪುಸಿಯುಬರಲಿಲ್ಲ । ಈಲೋಕದೊಳಗೆನ್ನಾ ಕರದು ಕೇಳದವರಿಲ್ಲಾ ॥ ಮೂಡಲಕ್ಕೆ ಹೋಗಿ ನಾನು ಮುತ್ತುಗಳ ತಂದೆ । ಪಡುವಲಕ್ಕೆ ಹೋಗಿ ನಾನು ಪಶುಗಳಾನೆ ತಂದೆ ॥ ೩೦ ॥ ಉತ್ತರಕ್ಕೆ ಹೋಗಿ ನಾನು ಉಡುಗರೆಯ ತಂದೆ । ದಕ್ಷಿಣಕ್ಕೆ ಹೋಗಿ ನಾನು ಧನಗಳನು ತಂದೆ ॥ ನಿನ್ನಾ ಮನದಾ ಬಯಕೆಯನು ಹೇಳುವೆನು ಜಾಣೆ ॥ ೩೧ ॥ ಸಣ್ಣಸಿಂಗನಾಣೆ ಮುಕ್ಕಣ್ಣನ ಮೇಲಾಣೆ । ಹೆಣ್ಣೇ ಸಂದೇಹಬೇಡ ನಿಮ್ಮಣ್ಣನ ಮೇಲಾಣೆ । ಬನ್ನಾಣೆಯಾಡುವಳಲ್ಲ ಪುಟ್ಟಿಯಾ ಮೇಲಾಣೆ ॥ ೩೨ ॥ ಶ್ರೀಃ ॥

ರಾಗ ತೋಡಿ, ಅಟತಾಳ.

ಬಾರೆಬಾರೇ ನಿನ್ನ ಬಯಕ್ಯಾಯಿತು ಕೈಸೂರ ॥ ತಾರೆ ಕೈತೋರ ಸತ್ಯಭಾಮೆ ಸಾಕ್ಷಾದಿಂದಿರೆ ॥ ನೀಬಾರೆ ॥ ಪಲ ॥ ಗಂಡಹೆಂಡರ ಕೂಟವು

। ಗಂಡುಮಕ್ಕಳು ನಿನಗಾಗುತಾರೆ । ಕಂಡ್ಯಾ ಸವತೆರೆಂಟಕ್ಕೆ ಐದಾರೆ । ಮಿಂಡೆಮಿಂಡೇರು ಮುಂದೆಬಂದಾರೆ ನೀಬಾರೆ ॥ ೧ ॥ ಹುಟ್ಟಲಾಯಿತವರಿಗುತ್ಕೃಷ್ಟಾ । ಅಷ್ಟ । ವಧುಹಕ್ಕೆ ಕೈವಿಡಿದ ಕೃಷ್ಣಾ । ಪಟ್ಟದರಸಿಗೆ ನಿನಗೆದ್ವೆಥರ್ಘಷ್ಟಾ । ಘಟ್ಯಾಗೆತ್ತಿದೆ ನಿನ್ನದುರುಷ್ಟಾ ॥ ೨ ॥ ಕರತಳದಲಿ ಪದ್ಮವುಂಟು । ನಿನ್ನ । ಕರಹಲ್ಲು ನೋಡೆರಡೆಂಟೊ । ಗುರು ಕುಚದಲ್ಲಿ ಮಧ್ಯವದುಂಟು । ಪೆದ್ದೊಡೆಚಿನ್ನೆ ನಿನಗರುವುಂಟು ॥ ೩ ॥ ಸೋಲುವೆ ನೆರೆಹೊರೆಗೆಲ್ಲಾ । ಕೈ । ಮೇಲು ನಿನ್ನದು ಪುಸಿಯಲ್ಲಾ ॥ ಕೇಳೊಬ್ಬರ ಹಂಗಿಗಳಲ್ಲಾ । ನಿನ್ನ । ಸೊಲ್ಲುಕೇಳಚ್ಚಿನ ಬೆಲ್ಲಾ ॥ ೪ ॥ ಅತ್ತೆಮಾವಂದರಷ್ಟು ನಿನಗೆ । ಅತ್ತಿ । ಗಷ್ಟಭುಜದ ದುರ್ಗಿಅಣುಗೆ ॥ ಚಿಕ್ಕ ನಾದ ನಾನೊಬ್ಬಾಳು ಒಳಗೆ । ಸುತ್ತ । ಯದುಕುಲೋತ್ತಮನ ಬಳಗೆ ॥ ॥ ೫ ॥ ಬಿಡಿಮುತ್ತು ಮೊರದಲ್ಲಿ ತರಿಸಿ । ನೀ । ಪಡಸಾಲಿಯೊಳು ರಂಗ ವಲ್ಲಿಯ ಬರಿಸಿ । ಯೋಳು ॥ ತಡವ್ಯಾಕೆ ದೀಪಗಳಿರಿಸಿ । ನೆನೆ । ಗಡಲೆ ಕಬ್ಬು ತೆಂಗು ಸುರಿಸಿ ನೀಬಾರೆ ॥ ೬ ॥ ದೇವಿಯರನು ತೃಪ್ತಿಗೈಸಿ । ರತ್ನ । ಗಾಣಿ ಕೆಯನು ಮುಂದೆ ಹ್ಯೊಸಿ । ನಿನ । ಗಾವಚಿಂತೆ ನೀ ಸಹಿಸಿ । ಇ । ನ್ನಾವ ದಭಿಷ್ಟ ಅರ್ಪಿಸಿ ನೀಬಾರೆ ॥ ೭ ॥ ಶ್ರೀಃ ॥

## ರಾಗ ಸೌರಾಷ್ಟ್ರ, ಮಟ್ಟೆತಾಳ.

ಮುತ್ತಿನ ಪೀಠದೋಳ್ಹತ್ತಿಕುಳಿತುಬಿಡಿ । ಮುತ್ತುತುಂಬಿದ ಮೊರ ಕೊರವಿ ಮುಂದಿಟ್ಟ್ಯಾ ॥ ಚಿತ್ತಜನಯ್ಯನಂತರಂಗ ಹಾರೈಸುತ್ತಾ । ಸತ್ಯ ಭಾಮೆಯು ಕೊರವಂಜಿಯ ನೋಡಿ ॥ ೧ ॥ ರಂಗಮಧ್ಯದಲಿಟ್ಟ್ಯಾ ರತ್ನದಾ ಪುಟ್ಟಿಯ । ನಂಗನೆ ತಾಯಿಗಭಿನಮಿಸಿ ಭಕ್ತಿಯಲಿ ॥ ಮಂ ಗಳ ವಾಕ್ಯವನಾಡೆಂದು ಕೊರವಿಗೆ । ಹೆಂಗಳೆ ದೈನ್ಯವ ಬಿಟ್ಟಳು ಮೊಗನೋಡಿ ॥ ೨ ॥ ಪುಲಿಚರ್ಮದಲಿ ಪದ್ಮಾಸನವಿಕ್ಕಿ ಕೊರವಂಜಿ । ಜೋಳಿಗಯ್ಯಾ ಕಿನ್ನರಿವಿಡಿದು ಮೋದದಲಿ ॥ ಕಲಕಿ ಬಿಡಿಮುತ್ತು ಕೈವಿಡಿ ಹಲಿ ತೆ ಱೇರುತ್ತಾ । ಒಲವಿಂದಾ ಸ್ವರವೆತ್ತಿದಳು ಶಕ್ತಿಯರನಾ ॥ ೩ ॥

ರಾಗ ಪುನ್ನಾಗತೋಡಿ, ಅಟತಾಳ

ಬನ್ನಿರೆನ್ನ ವಚನಕೆ ಬ್ಯಾಗದಿಂದಾಲಪ್ಪದಶಾ । ವರ್ಣಪೀಠಗಳಲಿದ್ದಾ ಪ್ರಸನ್ನ ಮುಖಶಕ್ತಿಗಳಿರಾ ॥ ಪಲ್ಲ ॥ ಅಂಬಬಾರೆ ಜಗದಂಬಾ ಸಂಭ್ರಮದಿಂದಲಿ ನಿನ್ನ ಕೃಪಾವ । ಲಂಬನಗೈದು ಈಮುದ್ದು ಕುಂಭಕುಚಾಸ್ಮಿತೆಗೇ । ಹಂಬಲಿಸಿದೆಲ್ಲ ಪೇಳ್ವೆನೆಂದು ಪ್ರ । ಲಂಭನಮಾಡದೆ ಆಲಂಪುರಿ ಜೋಗ । ಳಂಬ ಬಾ ರಂಬುಜಾಕ್ಷಿ । ಬನ್ನಿರೆನ್ನಾ ವಚನಕೆ ॥

॥ ೧ ॥ ಅಳಿಕುಂತಾಳೆ ನೀನಾದಿ ಸ್ಥಳದಿ । ಹೊಳೆವೆ ಪೀಠವಿ ಮೆರವೆ ನೀನತಿ । ಬಲದಶಕ್ತಿಯೆಂಬು ನಾಸಿನ್ನ । ಬಳಿವಿಡಿದು ಕೊಂಡಾಡುವೇ ॥ ನಳಿನಶರಾವಳಿಯು ಹತಿಗೆ । ಬಳಬಳಕುವ ಸತ್ಯಭಾಮೆಗೊಂ । ದೊಲವ ಪೇಳುವೆ ಬಾ ವಚನಕೆ । ತುಳಜಾಭವಾನೀ ॥ ಬನ್ನಿರೆನ್ನಾ ವಚನಕೆ ॥ ೨ ॥ ವಲ್ಲಾಭೆಕೆಲದಲೊಲಿದು ಭಕ್ತರ । ಸಲಹುವಾ ಕಂಜಪಲ್ಲವಪಾಣಿ ನೀ । ನಿಲ್ಲಾದೆ ಹೆಚ್ಚೀನುನ್ನತದಿಂದ । ಉಲ್ಲಾಸದಲೈತಂದೂ ॥ ಹುಲ್ಲೆಗಂಗಳಿಗಭಯವಚನ । ನಿಲ್ಲಿನಾಡಿಕೊಡುವೆ ನೀಯೆನ್ನ । ಸೊಲ್ಲಿಗೆ ಸಾಕಾರಯಾಗೂ । ಕೊಲ್ಲಾಪುರದ ಮಹಮಾಯಿಾ ॥ ಬನ್ನಿರೆನ್ನಾ ವಚನಕೆ ॥ ೩ ॥ ರನ್ನದುಡಿಗೆಯನುಟ್ಟು ಚಿನ್ನದೊಡ್ಯಾಣವನಿಟ್ಟು ಅ । ಭಿನ್ನಸಂಪದವೀವುದು ನೀಕಡೆ । ಕಣ್ಣಮಾತ್ರದಿ ಈಕ್ಷಿಸೀ ॥ ರನ್ನೆ ಸತ್ರಾಜಿತಕುವರಿಗೆ ಮನದನುನಯ । ವನ್ನು ಪೇಳುವೆ ಪ್ರಸನ್ನಳಾಗೆನ್ನ ವಚನಕೆ । ಸನ್ನತಿ ಚಂದಮ್ಮಾ ॥ ಬನ್ನಿರೆನ್ನಾ ವಚನಕೆ ॥ ೪ ॥ ಬೆಜ್ಜರವನ್ನು ಪೇಳುವೆ ಬೇಡಿದ । ಖಜ್ಜಾಯವನ್ನು ಕೊಡುವೆ ನಿನಗೆ । ಉಜ್ಜುಗದಿಂದ ಪೂಜೆಗೈವೆ ಜಗ । ಜ್ಜನನಿ ಮಹಮಾಯಿಾ ॥ ಕಜ್ಜಳಕಂಗಳ ಕಾಮಿನಿಗೆ ಮಂ । ದಜ್ಜ ತಿಳಿಸಿಕೊಡುವೆನೀಮುಖ । ಅಬ್ಜಕೆ ಬಂದೊದಗೂ ಉಜ್ಜನೀ ಮಹಕಾಳೀ ॥ ಬನ್ನಿರೆನ್ನಾ ವಚನಕೆ ॥ ೫ ॥ ಕಾವರದಿಂದಲಿ ನಿನ್ನಾ ಭಜಿಸುವ । ದಾವರಸುಗಳಾದರಾಗಲಿ । ತೀವರದಿಂದ ವರವನುಗಿದು ಸ್ಥಾವರಕೆ ಸಮಮಾಡುವೆ ॥ ಕಾವರಿಗಿಷ್ಟವ ಕರದುಕೊಡುವೆ । ತಾವರೆಗಂಗಾಳೆ ಬೆನ್ನಿಲಿರೂ । ಕೋವಿದಗುಣಿಗೆ ಅಭಯಕೊಡುವೆ । ಮಾಹುರೀಯಲ್ಲಮ್ಮಾ ॥ ಬನ್ನಿರೆನ್ನಾ ವಚನಕೇ ॥ ೬ ॥ ಎದುರೆ ನಿನಗೆ ಭೂತಳ

ದೊಳೂ । ತ್ರಿದಶರೂ ನಿನ್ನೊಳಿಗದೊಳು ಅ । ಭ್ಯುದಯುಕರ್ತಳೆಂದು ಪ್ರೇಮಾ । ಸ್ಪದದಿ ನಿನ್ನ ನಾ ಬೇಡಿಕೊಂಬೆ ॥ ಸುದತಿ ಯೌವನ ಮದ ದತಿಶಯ । ಪದರಿ ಬೆದರಿ ಬೆಚ್ಚುವಾಳಿಗೆ । ಉದಯುವಾಗಲಿ ಮನದ ಬಯಕೆ । ಮಧುರೀ ಮೀನಾಕ್ಷಿ ॥ ಬನ್ನಿರೆನ್ನಾ ವಚನಕೆ ॥ ೭ ॥ ಮುಂಚದ ಲಾಡಿದ ಆಂಚಗಮನೆಯು । ಸಂಚಗಾರವ ನಾನು ಪಿಡಿದೆ । ಪಂಚಶರನ ಬಾಧೆಯಿಂದಾ । ಮಂಚಾದಿ ಹೊರಳಲೂ ॥ ಹಂಚಿಕೊಡುವೆ ಅವಳ ತಾಪವ । ಕೊಂಚೆಮಾಡದೆ ಎನ್ನ ಜಿಹ್ವೆಗೆ । ಮಿಂಚುವ ನುಡಿದೋರೆ । ಕಂಚೀಕಾಮಾಕ್ಷಿ ॥ ಬನ್ನಿರೆನ್ನಾ ವಚನಕೆ ॥ ೮ ॥ ನಿನ್ನಾ ಜಡೆಯಾ ಬೆನ್ನಿಲಿ ಪೊತ್ತೂ । ಕಿನ್ನರಿವಿಡಿದು ಕಿಂತುವಬಿಟ್ಟು ಅ । ಛಿನ್ನಮನದಿ ನಿನ್ನ ಪೊಗ ಳುವೆ । ಅನ್ಯದೈವ ನಾನರಿಯೆನೇ ॥ ಖಿನ್ನಳಾಗಿ ಕಾಂತನಗಲಿದ । ಕುನ್ನಿಗೆ ಜೀವಮರುಗಿ ಬಂದೆ । ಯೆನ್ನ ನುಡಿ ನೀನೆತ್ತಿಕೊಳ್ಳೆ । ಕನ್ನೆಕುಮಾರಿ ॥ ಬನ್ನಿರೆನ್ನಾ ವಚನಕೆ ॥ ೯ ॥ ಶ್ರೀಃ ॥

ರಾಗ ಸೌರಾಷ್ಟ್ರ, ತ್ರಿಪುಟತಾಳ.

ಸೃಷ್ಟಿಯೊಳಿದ್ದ ಪುಣ್ಯಕ್ಷೇತ್ರ ಮೊದಲಾದ । ಅಷ್ಟೋತ್ತರಸ್ವಯಂವ್ಯಕ್ತ ॥ ಮುಟ್ಟಿ ಪೇಳುವೆ ನಿನ್ನಾ ಬಯಕೆ ಪೇಳುವೆ ಸರ್ವಾ । ರಿಷ್ಟಪರಿಹರವೆ ಕಂಜಾಕ್ಷಿ ॥ ಪಲ್ಲ ॥ ಶ್ರೀಪುರುಷೋತ್ತಮ ಕೂರ್ಮಪಾದಾ । ದ್ವೀಪಾಂತಾ ಪುತ್ತಾನಪಾದಾ ॥ ಆಪರ್ವತ ಶಿವಕಂಚಿಚಿದಂಬರ । ಸುಬ್ರಹ್ಮಣ್ಯಾ ವೃಂದಾ ವನವೂ ॥ ೧ ॥ ಮಂಗಳಗಿರಿ ಪುಷ್ಪಗಿರಿ ಪಾಷಾಣಗಿರಿ । ರಂಗಗಿರಿ ಶ್ರೀಯೂಳ್ವಗಿರಿಯೂ ॥ ಶೃಂಗಾರ ವರನಾರಾಯಣಗಿರಿ । ಕನಕಾಂಬರಗಿರಿ ಅಸ್ತಾಗಿರಿಯೂ ॥ ಹೆಂಗಳೆ ವೆಂಕಟಗಿರಿ ದೊಡ್ಡಾವಿ । ಹಂಗಗಿರಿ ಅರಿಚ ನಾಗಿರಿಯು ॥ ೨ ॥ ಉದಯಾದ್ರಿ ಕುಂಜಾದ್ರಿ ವೃಷಭಾದ್ರಿ ತೋತಾದ್ರಿ । ಬದರಿಕಾಶ್ರಮ ಸಿಂಹಾದ್ರಿ ॥ ಮುದದಿ ಘಟಿಕಾಚಲ ಇಂದ್ರಾಚಲ ಅರು ಣಾಚಲ । ಮದನಜನಕನಾ ವೈಕುಂಠಾ ॥ ಸುದತಿ ಕೇಳ್ಕಾರಕಪುರಿ ವಿಂ ಧ್ಯಾದ್ರಿಪುರಿ ಮುಕ್ತಿ । ಆದೆ ಧರ್ಮಾಪುರಿ ಗೋಷ್ಠಿಪುರಿಯೂ ॥ ಅದೆ ಹಿರಣ್ಯಾಪುರಿ ಬ್ರಹ್ಮಾಪುರಿ ಅರಿಕ್ಷೇತ್ರ । ಕುರುಕ್ಷೇತ್ರಾ ಧರ್ಮಕ್ಷೇತ್ರಾ ॥ ॥ ೩ ॥ ರಂಗಮಂದಿರ ಸರ್ವಾ ಗೋಕರ್ಣಕ್ಷೇತ್ರ ಶು । ಭಾಂಗಿ ಕೇಳಾ

ನಂತಶಯನಾ ॥ ಮಂಗಳಾತ್ಮಳೆ ಅಯೋಧ್ಯಾನಗರ ಅ। ನಂಗನಯ್ಯನ ।
ದ್ವಾರಾವತಿಯೂ ॥ ಹೆಂಗಾಳಾಲಿ ಸುಮಧುರ ಮಾಯಾಕಾಶೀಕಂಚಿ ।
ಹಿಂಗಾದಾವಂತೀಕಾಪುರಿಯೂ॥ ಗಂಗಾಪ್ರಯಾಗಾ ನಾರಾಯಣಾಶ್ರಮ
ಪಾಪ। ಭಂಗಾ ವೈಷ್ಣವ ಮಾತಂಗಾ ॥ ೪ ॥ ಚಕ್ರಾವರ್ತನ ಸುವರ್ಣ
ಘಟಿಕಾಭುಕ್ತಿ । ಸೌಖ್ಯಸ್ಥಳ ಘಟಿಕಾಚಲವೂ ॥ ಮುಕ್ತಾ ಶ್ರೀನಿವಾಸಾ
ಭ್ರಮ। ರಸ್ಥಳ ಶ್ರೀಮುಷ್ಟ ಮಿಕ್ಕಸಂಗರಸಾಗರವೂ॥ ಕಕ್ಕಸಕುಚೆ ಚಿತ್ರ
ಕೂಟ ಮಣಿಕೂಟಗಳು । ಇಕ್ಕೊ ಅಹೋಬಲಕಾಳಿವೃಷಭಾ ॥ ಸಕ್ಕರೆ
ಚಂದ್ರುಟಿಯಾಳೆ ಅವಂತಿವ್ರಜ। ಗಂಗಾಸಾಗರ ಸಾಲಗ್ರಾಮಾ ॥ ೫ ॥
ಕಪಿಲಾಮಹಾತಪ ನಿಖಿಲಸಾಗರಮಯದ। ಸಪ್ತಾಕೋಟಿ ಶ್ರೀಸ್ವಾಮಿ॥
ಅಪರಂಪರಮಹಿಮ ಆದಿಕೇಶವನಾ। ಸಿಕತ್ರಿಯಂಬಕ ದರ್ಭಶಯನಾ ॥
ತ್ರಿಪುರಾರಿ ಹರಿಹರೇಶ್ವರಸಿಕಾಕೋಳಮೇ। ಘಪಟಳಗಯಧನುಷ್ಕೋಟಿ॥
ಚಪಳೆ ಅಳಗಿರಿ ಭೀಮಕಾಖ್ಯಗುರು ಕಾಯಾದಿ । ಜಪಿಸು ರುಧಿರಾಚಲ
ತಳವಾ ॥ ೬ ॥ ಕೇದಾರಾಮಧ್ಯಾಚಲ ಶೋಧಾರಾಮೇಶ್ವರ । ಆಧಾರಾ
ದಿಂದಾಲಿ ನೆನವೇ ॥ ಮಾಧವಾನರ್ಧಾಂಗಿನಿ ನಿಜಪೂರ್ವಮಂದಿರವು ।
ಶ್ರೀದೇವ ಉಡುಪಿ ಕೃಷ್ಣಾ ॥ ಬಾದರಾಯಣ ಪೂರ್ಣಬೋಧಸದ್ವಿಜಯಾ।
ವಾದಾ ರಜತಾದ್ರಿಪೀಠಾ ॥ ಮೋದಾದಿಂದೆನ್ನಾ ಜಿಹ್ವೆಗೆ ನೀವಾಗುವಾ ।
ಆದಾಯಾ ಕೇಳಂಬುಜಾಕ್ಷಿ ॥ ೭ ॥ ಶ್ರೀಃ ॥

ಸಾಂಗತ್ಯ.

ಭೂತಭವಿಷ್ಯದ್ವರ್ತಮಾನವಿ। ಖ್ಯಾತಮಾಡುವೆ ಅಂಚಾಗಮನೇ ॥
ಮಾತಾನಾಲಿಸು ನಿನ್ನಾ ಮನದೊಳಂತಃಕರಣ । ವಾತುಬಂದರೆ ಖರಿ
ಯಾವನ್ನೆ ॥ ೧ ॥ ಬಣ್ಣಾದಾ ಚಿಣುಕೋಲು ನಿನ್ನಾ ಕೈಯ್ಯಲಿಪಿಡಿ।
ದೆನ್ನಾ ವಾಕ್ಯಕೆ ಚಿತ್ತಾನೀಡೆ॥ ಸನ್ನದ್ಧರಾಗಿ ದೇವಕರ್ಳೆಲ್ಲರು ಎನ್ನಾ।
ಬೆನ್ನೀಲಿ ನಿಂದಿಹಾ ಪರಿಯಾ ನೀನೋಡೆ ॥ ೨ ॥ ಪಾಣಿಪಲ್ಲವದಿ ಚಿಣಿ
ವೀಣಾ ಕೈಯಲಿಪಿಡಿದು। ಪ್ರಾಣಾಧನವ ಮನದೊಳಿಟ್ಟೊ ॥ ಕಾಣಿಸಿ
ಕೊಡು ನಿನ್ನಾ ನುಡಿಯೆಂದು ಕೊರವಿಗೆ । ಜಾಣೆ ಶರಣೆಂದೂ ಕೇಳಿ
ದಳೂ ॥ ೩ ॥ ಶ್ರೀಃ ॥

## ದ್ವಿಪದಿ.

ಆದಿಯಲಿ ಸತ್ರಜಿತ ಅರಸರೊಳಗಧಿಕ । ನಾದ ನಿನ್ನ ಪಡದಯ್ಯ ಅತಿ ಭಕುತಿಯಿಂದ ॥ ದಿನಕರನ ಪ್ರಾರ್ಥಿಸಿದ ಘನತಪವಗೈದು । ಕನಿಕರದಿ ರವಿಕೊಟ್ಟ ಮಣಿಶ್ಯಮಂತಕವು ॥ ಒದಗಿ ಮನೆವಳಗೆಸೌವರ್ಣಕರೆವುತಿರೆ । ಯದುರಾಜ ನನಗೆಂದು ತಾನಿಚ್ಛಿಸುತಿರಲು ॥ ತಾತೆಗದು ತಮ್ಮಂಗೆ ತವಕದಲಿ ಕೊಡಲು । ಆತ ಬೇಟೆಗೆಪೋದನಲ್ಲಿ ಮೃಗಸಿಂಹ ॥ ಮುರಿತಿಂದು ಮಣಿವೈದ ಮೃಗನಭಲ್ಲೂಕ । ವೆರಸಿಮಣಿಯನು ವೈದುವಾಸವಾದಲ್ಲಿ ॥ ಮಗಳ ತೊಟ್ಟಲಿಗೆ ತಾ ಸಂತಸದಿ ಕಟ್ಟೆ । ಸುಗುಣ ಜಾಂಬವನು ಸಂತೋಷದಿರಲು ॥ ಇತ್ತದುಗುಡದಲಿ ವರಸತ್ರಜಿತರಾಯು । ತೆತ್ತಿಸಿದ ಆಪವಾದ ದಿವಿಜಪತಿ ಹರಿಗೆ ॥ ತಮ್ಮಪ್ರಸೇನುವಿನ ತಾ ಕೊಂದು ಮಣಿಯು । ಘಮ್ಮನೆ ತೆಗದುಕೊಂಡೆಮ್ಮ ಘಾತಿಸಿದಾ ॥ ಈಪರಿಯು ಲಾಡಲಾ ಇಂದಿರಾಪತಿಯು । ಕೋಪದಲಿ ಕಾನನವ ಕುಶಲದಿಂದ ರಸೀ ॥ ಆಪ್ರಸೇನನು ಅಳಿದ ಅಂಗದ್ಹೆಜ್ಜೆಗಳ । ಈಪ್ರಕಾರವು ಎಂದು ಎಲ್ಲರಿಗೆ ಪೇಳಿ ॥ ಗುಡ್ಡಕ್ಹೆಜ್ಜೆಯುಹಾಕಿ ಘುಡುಘುಡಿಪನಾದ । ದೊಡ್ಡದಾಗಿದೆ ಕರಡಿಘೋರಿರಾಯನೆಂದು ॥ ಅವನ ಕುವರಿಯು ಅಳಲು ಅವನಾಡ್ದಮಣಿಯು । ತವಕದಿಂದಲಿ ತಂದು ತರಳೆ ನಿನ್ನೆದುರೆ॥ ಕಟ್ಟಿಹುದು ನೋಡೆಂದು ಕರುಣಿಸುತ್ತಿರಲು । ಬೆಟ್ಟದೊಳು ಪೊಕ್ಕುಹರಿ ಬಿಂಕದಲಿ ಗೆದ್ದು ॥ ತಂದ ಮಣಿಕನ್ನಿಕೆಯು ವೃಂದಜನ ನೋಡೆ । ಬಂದು ನಿಮ್ಮಯ್ಯ ಶಿರಬಾಗಿ ನಾಚಿದನು ॥ ಅಪರಾಧ ಕ್ಷಮಿಸೆಂದು ಆಗ ನಿನ್ನನು ದಿ। ಪವಿತ್ತಮಣಿ ಸಹಿತ ತಾನಿತ್ತನಾಗ ॥ ಕೃಷ್ಣಾರ್ಪಣಾವೆಂದು ಕ್ಲೇಶವನೆ ಬಿಟ್ಟು । ವಿಷ್ಣು ತಾ ನಿನ್ನ ಕರವಿಡಿದು ಉತ್ಸಹದಿ ॥ ೧ ॥ ಮಣಿವ್ಯಾಜ್ಯದಿಂದ ನಿನ್ನಣುಗ ಕೈಕೊಂಡ । ಫಣಿಶಾಯಿ ಶ್ರೀಕೃಷ್ಣ ಪರಮಪ್ರಚಂಡಾ ॥ ಅಪರಿಮಿತ ಸ್ನೇಹವನು ಅನ್ಯೋನ್ಯ ಮಾಡಿ । ವಿಪರೀತ ಸುಖ ಪಡಿಸಿ ಆದರಿಸಿ ನೋಡಿ ॥ ನಿನ್ನೊಡನೆ ತನುಮನ ಧನವನೊಪ್ಪಿಸಿದ । ನಿನ್ನೊಳಗೆ ಸುಖಸುರತ ನೇಮ ತೋರಿಸಿದ ॥ ನಿನ್ನ ಬದಿಯಗಲಿರನು ತಾನು ಅರೆಘಳಿಗೆ । ನಿನ್ನ ಮುಖಚಂದ್ರಕವನೇ ಚಕೋರಾಕ್ಷ ॥ ನಿನ್ನ

ಮುಖಕಮಲಕವನೇ ಮಧುಪಸೌಖ್ಯ । ನಿನ್ನ ಅಧರಾಮೃತವನೇಕ
ಬಗೆ ಸವಿವ ॥ ನಿನ್ನ ಸೌಂದರ್ಯವನು ನೆರೆನೋಡಿ ನಲಿವ । ನಿನ್ನ ಗುಣ
ಹಗಲಿರುಳು ನೆನವನತಿಬಲವ ॥ ಸರ್ವಭಾಮೆಯರೊಳಗೆ ಸರಿಗಾಣೆ
ನೆಂಬ । ಗರ್ವರೂಪಳೆ ನಿನ್ನ ಗಲ್ಲಪಿಡಿದೆಂಬ ॥ ನಿರ್ವಹಿಸುವೆನು ಬಯಕೆ
ನೇಮಗಳನೆಂಬ । ಪರ್ವತೋದ್ಧಾರಪಾವನ ನಿರಾಲಂಬ ॥ ಅಪ್ಪಿದಣಿ
ಯನು ಮುದ್ದು ಗುಪ್ಪಿ ತಾ ದಣಿಯ । ಉಪಚರಿಸಿ ಪುಂಜದಲಿ ಹೊರಳಿ
ಮನದಣಿಯ ॥ ಗಂಧಾನುಲೇಪವನು ಮಾಡ್ಯವನುದಣಿಯ । ಅಂದದಿಂ
ಹಾರಗಳ ಹಾಕ್ಯವನುದಣಿಯ ॥ ಫಣಿವೇಣಿ ಬಾರೆಂದು ಪಾಲಿಸೆವದ
ಣಿಯ । ಗುಣರೂಪ ಸೌಂದರ್ಯ ಎಣಿಸೆವನುಗಣಿಯ ॥ ಘನಕೆಂಪು
ಅಧರ ಬಲಗೈಯಿಂದ ಪಿಡಿವ । ಸ್ತನವದನಭ್ರೂಲತೆ ಯೌವನಕೆ ಬಾಯಿ
ಬಿಡುವ ॥ ತನುಕಾಂತಿ ಘನನಿತಂಬಿನಿಗೆ ಹಿಗ್ಗುವನೆ । ಇನಿತು ಅನುಭವ
ಖರೆಯೆ ಧಿಟ್ಟೆ ಹೇಳಿದನೆ ॥ ೨ ॥ ಇಂತಿರಲು ನಾರದನು ವಿಗಡತನದಿಂದ ।
ಕಂತುಪಿತನಿಗೆ ಪಾರಿಜಾತವನೆ ತಂದು ॥ ತಾಕೊಡಲು ಸ್ತ್ರೀಯ್ಯಾಳಿ
ತವಕಮಾಡಲಿಕೆ । ಕುಹಕಮಾತಾಡಿ ರುಕ್ಮಿಣಿಗೆ ಕೊಡಿಸಲಿಕೆ ॥ ಕೊಡು
ವಾಗ ತೊಡೆಮೇಲೆ ಕೋಮಲಾಂಗಿಯನು । ಸಡಗರದಿ ಕುಳ್ಳಿರಿಸಿ ಮುಡಿ
ದಡವಿಪ್ರಿಯನು ॥ ಅತಿಶಯವ ಮಾಡಲಾ ಅದನೆಲ್ಲ ನಿನಗೆ । ಚತುರ
ನಾರದ ಪೇಳೆ ಚಂಚಲದಿಯಿಳೆಗೆ ॥ ಮೂರ್ಛೆಯನು ತಾಳಿದ್ದು ಮುನಿಸು
ನೀನಾದೆ । ಸಾರ್ಚಿಸಿದೆ ಸತ್ಯವೇ ಮಿಥ್ಯವೇ ಬೋಧೆ ॥ ೩ ॥ ಸಹಿಸಲಾರದೆ
ಪತ್ರಬರೆದು ಕಳುಹಿಸಿದೆ । ವಹಿಸಿ ರುಕ್ಮಿಣಿಯ ನಿನ್ನ ಬಯಕೆ ತೀರಿ
ಸಿದೆ ॥ ದೂತೆಯಟ್ಟಿದರೆ ಪತಿಪಾರಿಸದಲಾದ । ಮಾತಿನಲಿ ಧಾತೂಪ
ಶಮನಮಾಡಿದನು ॥ ಅರವಿಂದ ಬಾಣದಿಂದಾಗೊ ವ್ಯಥೆವೊಂದು । ಸರಿ
ಸವತಿಯೊಳು ಸ್ನೇಹಮಾಡೊ ವ್ಯಥೆವೊಂದು ॥ ಬಳಗೆಲ್ಲ ತಲೆಮಂಡೆ
ಕುಕ್ಕೊ ವ್ಯಥೆವೊಂದು । ಕೃಷ್ಣ ಬಿಟ್ಹ್ಯಾಡ್ವದದು ಕೇಳೊ ವ್ಯಥೆವೊಂದು ॥
ಕಷ್ಟಪಟ್ಟೆತು ಸ್ವರ್ಣವರ್ಣಗಾತ್ರಂಧು । ಅನ್ನೋದಕವ ತೊರದೆ ಅಯ್ಯ
ಯ್ಯೊ ಅಬಲೆ ॥ ನಿನ್ನ ತಾಪಕೆ ಎನ್ನ ಕಣ್ಣೊರತೆ ಬಾಲೆ । ಮುಂದುಗಾ
ಣದುಪಾಯವೊಂದು ನೋಡದಲೆ ॥ ಬಂದೆ ದಂಡಿಗೆಹತ್ತಿ ಕಾಂತನಿದ್ದೆ

ಡಿಗೆ ॥ ಕಣ್ದೆರದುನೋಡಿ ಕರಿಯದೆ ಸುಮ್ಮನಿರಲು । ಹಣ್ಣುಪಗಡೀ ಆಟ ಹವಣದಲಿ ನಿಂದು ॥ ಸವತಿ ರುಕ್ಮಿಣಿಯೊಳಗೆ ಸರ್ವೇಶನಿರಲು । ಅವ ಗಡಿಸಿ ನೀನುಡಿದೆ ಅಮರವಲ್ಲಭಗೆ ॥ ತಾಳಿದನು ತೋಳಿನಲಿ ವಪ್ಪೊಬಾ ಲೆಂದು । ಏಳೆಂದು ಎಬ್ಬಿಸಿದ ಮೂರ್ಛೆಗೈದಿರಲು ॥ ಘಾಳಿಬೀಸಿದ ತನ್ನ ಕೈಯಲೊಲಲೊಲದು । ಎದೆಗವಚಿ ನಿನ್ನ ತಾನಾಲಿಂಗಿಸಿದನು ॥ ಸುದತಿ ಗೆಂದನು ನಿನ್ನ ಬಯಕೆಹೇಳೆಂದು । ವನಿತೆ ಮಾಜುವರೆ ಇದರೊಳಗೆ ವಂದನ್ನೆ। ಅನುಭವವಿದ್ದರೆ ಖರಿಯುವನ್ನೆ ಹುಸಿಯನ್ನೆ ॥ ೪ ॥ ಮಲತು ಕಾದಿದಳು ರುಕ್ಮಿಣಿಯು ನಿನ್ನೊಡನೆ । ಛಲದಿ ಪ್ರತಿಭಟಿಸಿ ಮಾರ್ಮಲತೆ ಗಜಯಾನೆ ॥ ಕೃಷ್ಣನಿಬ್ಬರಿಗೆ ನ್ಯಾಯವನು ಹೇಳಿದನು । ಬಿಟ್ಟಾಡ್ದೆ ಪತಿ ನಿಂದೆಮಾಡ್ದೆ ಬಲು ನೀನು ॥ ಕರವಿಡಿದುಕರದೆ ಕಾಂತನ ನಿನ್ನ ಮನೆಗೆ। ಗಹಿಮಾಡಿ ಗದರಿಸಿದ ಶ್ರೀಕೃಷ್ಣ ನಿನಗೆ ॥ ಕಲಹವೆಗ್ಗಳ ಕಾಂತನೊಳಗೆ ನೀಮಾಡಿ । ಕಲಹಂಸಗಮನೆ ಕಠಿಣೋಕ್ತಿಗಳನಾಡಿ ॥ ಶಪಥಮಾಡಿದೆ ಕಾಂತನೊಳಗೆ ಕಂಜಾಕ್ಷಿ । ಗುಪಿತದಲಿ ಕಾಳಿಯನು ಅರ್ಚಿಸಿದೆ ಸಾಕ್ಷಿ॥ ನಿನಗೆ ಕೊಟ್ಟಳು ಕಾಳಿ ಅಭೀಷ್ಟವನು ಮೆಚ್ಚಿ । ಕಣಕ ತುಪ್ಪದಿ ಬಿತ್ತು ಕಾಂತೆ ಮನಮೆಚ್ಚಿ ॥ ೫ ॥ ಶ್ರೀಃ ॥

ರಾಗ ಸಾರಂಗ, ತ್ರಿಪುಟತಾಳ.

ಬಂದನೆಂದು ತಿಳಿಯೆ ಸ್ಮರನಮಾತಿನ ಗಿಳಿಯೆ । ಸಂದೇಹವ್ಯಾತಕೆ ಸಿಂಧುರಗಮನೆ ॥ ಇಂದು ನಡಿವೆ ದೂತಿಯರ‍್ಯಾಕೆ ಚಂದಿರಾನನೆ । ಇಂದು ಯೋಗವು ಬಂದು ನಿಂದದೆ ಇಂದಿರಾಪತಿ ॥ ಪಲ್ಲ ॥ ಗೆದ್ದೆ ಕಾಲಿಲಿ ಒದ್ದೆ ಕಷ್ಟವ । ಬಿದ್ದೆ ಸವತಿ ಬೆನ್ನಾ ॥ ಮುದ್ದೆ ತೀರಿತು ಪೊದ್ದೆ ಕೃಷ್ಣ ನೀ । ನಿಪ್ಪ ಸ್ಥಳಕೆ ಅರ್ಧರಾತ್ರಿಲಿ ॥ ೧ ॥ ಪಿಡಿದು ಗಲ್ಲವ । ತಡದು ತನು ಪೊಂ । ಗೊಡಕುಚಕುಗುರಿಕ್ಕಿ ॥ ತೊಡೆಯಮೇಲಿಟ್ಟು । ವಡಬಡಿಸಿ ಸೋ । ಲ್ಮುಡಿವಿಡಿದು ಮುದ್ದಿಡಲು ಶೌರಿ ॥ ೨ ॥ ಎಳೆದುಳಸಿಯ ತಳತಳಿ ಸುವ । ಹೊಳವ ಮುಕ್ತಾವಳಿಯಾ ॥ ಚಲುವ ಕಂಠದ । ತಳಿರು ತಳ ಕಾಲಿಳಿಯಲೊಪ್ಪುವ । ನಳಿನನಯನನು ॥ ೩ ॥ ಹೊಟ್ಟೆಕಂದನ । ಪುಟ್ಟೆ ಸಿಂಗನ ಮುಟ್ಟೆವಿನೆ ಕೊರಳಾಣೆ ॥ ಪುಟ್ಟೆಯಮೇಲಾಣೆ । ಕಟ್ಟಿದ ತಾಯಿ

ತದಾಣೆ ॥ ೪ ॥ ಶಿವಸತಿಯುರ । ಶಿರದಮೇಲಾಣೆ । ಯುವತಿ ಜಕ್ಕಿಯು ರಾಣೆ ॥ ರವಿಯುಮೇಲಾಣೆ ಭುವಿಯುಮೇಲಾಣೆ । ತವ ಸಹೋದರ ನಾಣೆ ॥ ೫ ॥ ನಂಬಿಗೆ ಕೊಡುವೆ । ಅಂಬುಜಲೋಚನೆ । ಶಂಭುವಿನ ಮೇಲಾಣೆ ॥ ಕಂಬುಕಂಧರಳೆ । ಸಂಭ್ರಮದಲ್ಲಿ । ತುಂಬಿದ ಶಕುನವಿ ದಕೊ ॥ ೬ ॥ ಶ್ರೀಃ ॥

ವಚನ.

ದುಂಡೀ ನಿನಗಂಡ ಪ್ರಚಂಡ ಉದ್ದಂಡ ದನುಜರ ಗಂಟಲಗಾಣ । ಪಾಂಡವರ ಪಂಚಪ್ರಾಣ ಸುರರೊಡೆಯು ಸುದಾಮನ ಗೆಳೆಯು ॥ ಅಸುರ ರಣರಂಗಧೀರ ಜಾರಚೋರ ದಯಾಪರ ಶರಣಾಗತ ರಕ್ಷಾಮಣಿ । ಯದುಕುಲ ಶಿರೋಮಣಿ ಸರ್ವಾಭರಣ ಭೂಷಿತನಾಗಿ ॥ ಇಂದಿಪಿರುಳು ನಲಿವುತ ವಲಿವುತ ಗರುಡನ ಹೆಗಲನೇರಿ । ಬಂದನು ಹೊಂದ್ಯಾನು ಮುಸುಕು ತೆರದನು ॥ ಮಗ್ಗುಲೊಳು ಕುಳಿತನು ನಸುನಗುತ ಕೊಸರಿ ತೊಡೆಯುಮೇಲಿಟ್ಟನು । ಪೊಳವ ಗಲ್ಲವ ಮುಟ್ಯಾನು ಬಾಹುಲತೆಗ ಳಿಂದ ಕಟ್ಯಾನೂ ॥ ಅಧರಾಮೃತ ಸವಿದಾನು ಮುದ್ದಿಸಿ ಕರದಾನು ನಿನ್ನ ಬೆರದಾನು । ಬೆದರದಿರು ಬೆಚ್ಚದಿರು ಅರೆಘಳಿಗೆ ಸೈರಿಸು ಸಾವಧಾನದ ಲ್ಲಿರು ಸಂತೋಷದಲ್ಲಿರು ರನ್ನೆಶಿರೋಮಣಿ ॥ ಹೋಗಿಬರುವೆನೆ ಕೇಳೆಲಿ ದುಂಡು । ಮುತ್ತಿನ ಹಾರವ ಕೊಡೆ ನಿನ್ನ ಗುರುತೂ ಬೇಗರಿತ್ತ ಶಾಲಿ ಯುಮನವರಿತೂ ॥ ಕತ್ತರಿಸಿದಡಿಕೆ ಕರ್ಪುರದ ಬಿಳ್ಳೆಲೆಯಿತ್ತು ಕಳಿಸೆ । ಹೋಗುವೆ ತ್ವರಿತ ಕಂದನಕ್ಕೆಯ ಲಡ್ಡಿಗೆಕೊಡಿಸೆ । ನಿನಗೆಂದು ಮಾಡಿ ದ್ದು ಎನಗುಣಬಡಿಸೆ ॥ ೧ ॥ ಶ್ರೀಃ ॥

ರಾಗ ಭೈರವಿ, ಕುರಗಝಂಪೆತಾಳ.

ಅಂದವಾತ ಕೇಳಿ ನಲುವಿನಿಂದ ಮಾನಿನೀ । ತಂದು ಸ್ವರ್ಣಕಲಶ ದುದಕ ಮಂದಹಾಸಿನೀ ॥ ನಿಂದು ಮೊಗವನೋಡೆ ದಾಸ್ಯ ಹೊಂದಿ ಮನದೊಳೂ ಚರಣ । ದ್ವಂದ್ವವನ್ನೆ ತೊಳವೆನೆಂದು ಧೈರ್ಯ ತಾಳ್ದ ಳೂ ॥ ೨ ॥ ಕೊರವಿಶಾಲ ತೊಳದರಿನಗೆ ಕೊರತೆಯೆಂತುಟೋ । ಗರುವೆ

ಸವತಿಕೇಳ ನುಡಿಯಘನದ ಸಂಕಟ ॥ ೩ ॥ ಬಾಗಿಬಳುಕಿ ನಾರಿ ಸತ್ಯಭಾಮೆ ಸುಮ್ಮನೇ । ಆಗಲದನು ಕಂಡು ಅಜನ ಅಯ್ಯತಾನೆನೆ ॥ ೪ ॥ ಹಲವು ಯೋಚನ್ಯಾಕೆ ನುಡಿವರ್ಥಲ್ಲುಮುರಿವೆನಾ । ಜಲಜಭವಭವಾದಿ ವಂದ್ಯನಾಣೆಕೊರವಿ ನಾ ॥ ೫ ॥ ತಿಳಿದುನೋಡೆ ನಿನ್ನೊಳಗೆ ತೇಜಜ್ಞಾನವಾ । ತೊಳೆಯಬೇಕು ಚರಣವನ್ನು ತೋರಿಮೌನವಾ ॥ ೬ ॥ ಪದುಮನಯನೆ ಪಾಣಿಯಿಂದ ಪದವ ತೊಳೆಯಲೂ । ಪದುಮಧ್ವಜ ಅಂಕುಶದ ರೇಖೆ ಸುದತಿ ಕಂಡಳೂ ॥ ೭ ॥ ಶ್ರೀಃ ॥

ಸೀಸಪದ್ಯ.

ಶಿವಶಿವಾ ಇದುಯೇನು ಸೋಜಿಗವೊ ಲೀಲೆಯಲಿ । ಯುವತಿ ಕೊರವ್ಯಾದನೆ ಪ್ರಾಣನಾಥ ॥ ಸವನಿಸಿತು ಕಂಡಾಗ ಸ್ಮರನತಾಪವು ಎನಗೆ । ಸಟಿಯಲ್ಲ ಸತ್ಯವೂ ದೀನದಾತ ॥ ಭವರೋಗಹರನೆಂದು ಬಾಯಲಾಡಲು ನಾನು । ತವಸಾರವಲ್ಲವಾತನ್ನ ಪ್ರೀತ ॥ ಸುವಿಲಾಸ ಸುರರೊಡೆಯ ಸೊಗಸುಮಾಡಲು ಎನಗೆ । ಸೌಖ್ಯವಲ್ಲದೆ ಸುಮ್ಮನಿಹುದೆನೀತಾ ॥ ಶ್ರೀಃ ॥

ರಾಗ ಸೌರಾಷ್ಟ್ರ, ಆದಿತಾಳ.

ತನುಚತುಷ್ಟಯವೆಂಬೊ ಥಳಥಳಿಸುವ ಮಣಿ । ವಿನಯದಿಂದಿಟ್ಟಳು ಫಣಿವೇಣಿ ॥ ಘನವಾದ ಕೊರವಿಗೆ ಗದ್ದುಗೆಮಾಡೆಂದು । ಅನುರಾಗದಿಂದಲಿ ಮೃದುವಾಣಿ ॥ ೧ ॥ ಸ್ವರ್ಣಲತಾಂಗಿ ನಿರ್ಮಲವೆಂಬೊ ಕದಳಿಯ । ಪರ್ಣಪಟ್ಟಿಸಾಲಿಗ್ಹೊಂದಿಸಾಲೂ ॥ ವರ್ಣಿಪೆನೆಂತು ಭಾವಾರ್ಥದ ಜಲಪಚ್ಚೀ । ದೊರ್ಣವಾಯಿತು ಪ್ರೋಕ್ಷಿಸಾಲೂ ॥ ೨ ॥ ಕಡುಪ್ರೀತಿಗಳೆಂಬೊ ಷಡುರಸಸಾರವ । ಬಡನಡುಬಳಕುತ ನೀಡೀ ॥ ಮಡದಿ ಶಿರೋಮಣಿ ಮೆಚ್ಚಿಕೆ ಶಾಕವ । ಇಡುವಳು ಇಂಪಣಮಾಡೀ ॥ ೩ ॥ ಭಕ್ತಿಯ ಭಕ್ಷ್ಯವು ವ್ಯಕ್ತಿಯ ಶಾವಿಗೆ । ಯುಕ್ತಿಯ ಅನ್ನ ಶೋಭಿಸಾಲೂ ॥ ಶಕ್ತಿಯ ವರ ಮಧುರೋಕ್ತಿಯ ಘೃತಧಾರೆ । ಮುಕ್ತಿಗೆರಿಯೆ ಮನ್ನಿಸಾಲು ॥ ೪ ॥ ಮುಂದಿಟ್ಟು ಕರಗಳ ಮುಗಿದು ಸತ್ಯಭಾಮೆ । ನಿಂದಳು ಮೊಗವನೋಡುತಾಲಿ ॥ ಚಂದದಿ ಕೊರವಿಯಿಂಚರದಿ ಶಕ್ತಿಯರನು । ವಂದಿಸಿ ತುತ್ತುಗೊಳ್ಳುತಾಲಿ ॥ ೫ ॥ ಶ್ರೀಃ ॥

ರಾಗ ಭೈರವಿ, ಏಕತಾಳ.

ಆಣುತವುಣುತ ಕೊರವಿ ತೆಗದು ಪುಟ್ಟಿಒಳಗಿಡೇ । ಕೆಣಕಿಕೆಣಕಿ ಸತ್ಯಭಾಮೆ ಕೇಳಿವಮಾರ್ನುಡಿ ॥ ೧ ॥ ಹೊಟ್ಟೆತುಂಬ ಉಣ್ಣೆ ಕೊರವಿ ಹುಳಿಯನೀಡುವೆ । ಪುಟ್ಟಿವಳಗೆ ತುಂಬುವಂಥ ವಾಜಿಬೇಡವೇ ॥ ೨ ॥ ಮನೆಗೆ ಬೇಕಾದರಿನ್ನು ಮತ್ತೆ ಕೊಡುವೆನೇ । ಇನಿತು ಆಡಲಿಕ್ಕೆ ಕೊರವಿ ಯೋಚಿಸಿಂತೆನೆ ॥ ೩ ॥ ಹೊಟ್ಟೆಯೊಳಗೆ ಸೃಷ್ಟಿತುಂಬಿ ತಿಟ್ಟವಾಗಿದೇ । ಬೆಟ್ಟನುಂಗುವಾಕೆಗಿನ್ನು ರೊಟ್ಟಿಯಾಗ್ವದೆ ॥ ೪ ॥ ಭಕ್ತಿಯಲ್ಲಿ ನೀಡೆ ಅಲ್ಲಿ ತೃಪ್ತಿಗೈವೆನೆ । ಭಕ್ತಿಹೀನರಲ್ಲಿ ಒಂದು ತುತ್ತುಗೊಳ್ಳೆನೆ ॥ ೫ ॥

ರಾಗ ಸೌರಾಷ್ಟ್ರ, ಆದಿತಾಳ.

ನಾವುಂಡು ಮಿಕ್ಕದಲ್ಲಾದೆ ಉಣ್ಣದವರ್ಹಾರೆ । ನಾರಿಶಿರೋಮಣಿಕೇಳೂ ॥ ಭಾವಿಸೆನ್ನಯ ಮಾತ ಅನುಮಾನಗೊಳಬೇಡ । ಭಕ್ತಿಗುಣಗಳಿಂದ ಬಾಳೂ ॥ ೧ ॥ ಪಾಲೊಳು ಪುಟ್ಟಿದ ಪತಿವ್ರತೆ ಒಬ್ಬಾಳೂ । ನಾಲ್ಕ್ಮುಮೊಗದವನೊಬ್ಬ ಜಾಣಾ ॥ ಮೇಲಾದ ಕೋಡಗ ಮೆಚ್ಚಿನಾಟನಾಡುವಾ । ಲಾಲಿಸೆನ್ನಯ ಪಂಚಪ್ರಾಣಾ ॥ ೨ ॥ ಪಟ್ಟದರಸಿ ಒಂದು ಪಕ್ಷಿಯ ಸಾಕುವೆ । ಸೃಷ್ಟಿಯ ತಿರುಗುವನೊಬ್ಬಾ ॥ ಸಿಟ್ಟಿಲ್ಲಾದವನೊಬ್ಬ ಸಿದ್ಧಿಪೇಳುವನೊಬ್ಬ । ಧಿಟ್ಟವೈರಾಗ್ಯದವನೊಬ್ಬ ॥ ೩ ॥ ಸುಳ್ಳಾಡದ ಪಂಚಸುಗುಣಾರೆ ಬಳಗದ । ಬಳ್ಳಿ ಅತ್ತಿಯ ಮಕ್ಕಳ್ಹಾರೆ ॥ ಒಳ್ಳೊಳ್ಳೆವರ್ಹಾರೆ ವನಿತೆ ನಾವುಂಡು ಮಿಕ್ಕಾ । ವುಳ್ಳ ಶೇಷಕ್ಕೆ ಅಧಿಕಾರೇ ॥ ॥ ೪ ॥ ಕಳ್ಳತನವ ಬಿಟ್ಟ ಕರುಣಾಳು ಒಬ್ಬ ಕುಲವ । ಹಳ್ಳಗಾಣಿಸಿದಂಥಾ ಜ್ಞಾನೀ ॥ ಕೊಲ್ಲಿಸಿ ಅಣ್ಣನ ಕೋಟೆಯನಾಳುವ । ಬಲ್ಲಿದನೊಬ್ಬನ್ಹಾನೆ ಮಾನಿನೀ ॥ ೫ ॥ ಶೇಷಶಯನನೆ ಉಂಡಾ ಶೇಷಕ್ಕೆ ಅಧಿಕಾರಿ । ಭಾಸುರಖ್ಯಾತಿಗಳ್ಹಾರೆ ॥ ಈಸುಮಂದಿಯಮೇಲೆ ಇಚ್ಛೆವುಂಟಾಗ್ಯಂಡಾ । ಶೇಷವ ತೆಗದಿಟ್ಟೆ ನೀರೆ ॥ ೬ ॥ ಅರ್ಭಕತನದಲ್ಲಿ ಅತಿತಪವನೆಮಾಡಿ । ಉರ್ವಿಯಾಳುವ ರಾಜಯೋಗಿ ॥ ತಬ್ಬಿಬ್ಬಿ ನುಡಿಯಲ್ಲ ತಲೆಜಡೆಗಟ್ಟಿದ । ರೊಬ್ಬೊಬ್ಬರತಿಶಯವಾಗಿ ॥ ೮ ॥ ಪುಂಡರೀಕಾಕ್ಷ ಉದ್ಧಂ

ಡಸವತಿಯ ಮನೆ। ಉಂಡೂಬರುತಲ್ಹಾನೆಯಿಂದೂ ॥ ಭಂಡುಮಾಡು ವನವ ಮಿಂಡೇರ ಕಂಡಾರೆ। ದುಂಡಿ ಅಪ್ಪಣೆಕೊಡುನಿಂದು ॥ ೮ ॥

ಸೀಸಪದ್ಯ,

ಕೊರವಿ ಮಾತನು ಕೇಳಿ ಹರುಷದಲಿ ಪಟ್ಟವೀಳ್ಯವನಿತ್ತು। ಗರುವೆ ತವಕದಿ ಚಂದ್ರಗಾವಿ ಕುಪ್ಪಸ ಕೊಟ್ಟು ॥ ಧೊರೆಸತ್ರಾಜಿತ ಕೊಟ್ಟ। ವರ ದುಕೂಲವನಿತ್ತು। ಕೊರವಿ ನೀನಾಡಿದ್ದು ಖರೆಯುಬಂದರೆ ಎನ್ನ ॥ ಕೊರಳಾಣೆ ಕೊಡುವಂಥಾ ಪರಿಯು ಕೇಳೆ। ವರತನೂಮನ ಧನವ ಸ್ಥಿರವಾಗಿ ಅರ್ಪಿಸೀ ॥ ಚಿರಕಾಲ ನಂಬುವೆನೇ ಚಿತ್ಸ್ವರೂಪೆ। ಧರೆಗೆ ಉತ್ಪತ್ತಿ ಸ್ಥಿತಿ ಲಯಕಲಾಪೆ ॥ ಸ್ತುತಿಸಲಾಪೆನೆ ಸುಜನಮನದಿಸ್ಥಾಪೆ। ದುರುಳ ದುಷ್ಟರಿಗೆ ಅತಿಕ್ರೂರ ಕೋಪೆ ॥ ನಿರುಪಮಾನಂದ ಸ್ವಾನಂದ ಭೂಪೆ ॥ ೧ ॥

ಶ್ಲೋಕ:— ಬೆನ್ನಿನೋಳಿಹ ಬ್ಯಾಟಿಕಾರಶಿಶುವೂ । ನಿನ್ನಾಸ್ಯ ನೋಡುತ್ತಲೇ ಚನ್ನೀಕಾಡುತಲೀಹದೇ ಚಲಿಸದೇ ಚಿಣ್ಣನ್ನ ಸಂತೈಸಲೇ ॥ ಅನ್ಯಾಬಾಲರ ರೀತಿಯಲ್ಲವೆ ಸಖೀ ದೇವಾದಿ ಮೌನೀಗಳೇ। ಖಿನ್ನಾರಾದರು ಕೀರವಾಣಿಯಿವನಾ ಚಿನ್ನಾಟ ಬಲ್ಲೆಗ್ಗಳೇ ॥ ೧ ॥

ರಾಗ ಪೂರ್ವಿ, ಆದಿತಾಳ.

ಸಂಜೆ ಆಯಿತು ಕೊರವಿ ತಾಳೆ ನನ್ನ ಮನದಾ। ಅಂಜಿಕೆ ಹೋಗುವಂತೆ ಹೇಳೆ ॥ ಕಂಜವದನೆ ಕಪ್ಪನಿಡೆ ಎನ್ನಯ ಮೇಲೆ। ಕಂಜನಾಭನ ದಯವಿಡೆ ॥ ಮಂಜಿನೊಡೆಯ ಬಂದನಲ್ಲೆ ಮಂದಮಾರುತ। ಸಂಜನಿಸಿದ ಕೇಳುನಲ್ಲೆ ॥ ಕುಂಜರಗಮನೆ ನಿನ್ನ ಬಲಕಾಡುವಾ ಗಿಳಿಯೂ। ಪಂಜರ ಸಹಿತೀವೆ ಬಹಳ ॥ ಮಂಜುಳ ಸ್ವರಗೈವ ಪಿಕಾ ಮಾವಿನತಳಿರು। ಕಂಜನೈದಿಲೆಯು ಅಶೋಕಾ ॥ ರಂಜಿಸುತಿಹ ಜಾಜಿಚಂಡಾ ರಂಬಿಸಿ ಕೊಟ್ಟೆ। ಭುಂಜಿಸಾಲೊಲ್ಲ ಇಕ್ಷುದಂಡಾ ॥ ೧ ॥ ಕಬ್ಬುಬಿಲ್ಲಾ ಮಾಡಿದಾ ಕಂದಾ ಕೈಯೊಳು ಶರ। ಹಬ್ಬಿದ ಪುಷ್ಪಗಳಿಂದಾ। ತಬ್ಬಿಬ್ಬಿಗೊಳುವಂತೆ ಮಾಡಿ ತರುಣಿತಾಪಾ। ದೊಬ್ಬಾಲಾರದೆ ಮುಖಬಾಡಿ ॥ ಹಬ್ಬಿದಾ ಬಳ್ಳಿ

ಯಂತೆ ಧರೆಗೆ ಹವ್ಮೃೈಸಿ ನಾರೀ। ರಬ್ಬಾರಾದಲಿ ಈಕೆ ಹೊರಿಗೆ ॥ ಒಬ್ಬ ಬ್ಬರಾಗಿಯೆ ಬಂದೂ ವಾಯುೂವ ಬೀಸಿ । ಉಬ್ಬೆವನತೆಗಾಗೊದೆಂದು ॥ ಎಬ್ಬಿಸಿದಾರು ಕರವಿಡಿದೂ ಇಂದಿಗೆ ಮಾರಾ। ನ್ಹಬ್ಬಾವಾಯಿತು ಬಳಿ ವಿಡಿದು ॥ ನಿಬ್ಬೆರಗಾದಳು ಕೊರವೀ ನೀರಜಾಕ್ಷಿಗೆ । ತಬ್ಬಿಹೇಳಿದಳಾಗ ಲರುವೀ ॥ ೨ ॥ ಧಿಟ್ಟವಾಗಿ ಪೇಳುವೆನೀಗಾ ದಿವಿಜರೊಡೆಯಾ। ಘಟ್ಯಾಗಿ ಬರುವಾನು ಬೇಗಾ ॥ ರೊಟ್ಟಿತುಪ್ಪಾದೊಳಾಗೆ ಬಿತ್ತೆ ಶರಗುಗಂಟು। ಕಟ್ಟಿಕೊಳ್ಳಲೆ ಭಾಷೆವಿತ್ತೆ ॥ ಸೃಷ್ಟಿಗೊಡೆಯ ಬಂದು ನಿನ್ನಾ ಸಿಂಗರಿಸುವಾ। ಪಟ್ಟೆಮಂಚದಲಿ ತಾ ಮುನ್ನಾ ॥ ಶಿಷ್ಟವಾದಂಥ ಸೊಗಸು ಕಂಡೀ ಶೀಘ್ರಾದಿ ನನ್ನಾ। ಪಟ್ಟಣಕ್ಹೋಗುವೆ ದುಂಡಿ ॥ ೩ ॥ ಶ್ರೀಃ ॥

ರಾಗ ಕಾಂಬೋಧಿ, ಆದಿತಾಳ.

ನಡದಾಳೊ ಕೊರವಂಜೀ। ಬಡನಡೂ ಬಳಕುತಾ। ಮುಡಿಯನಲ್ಲಾಡುತ । ಬಿಡಿಹುವ್ವು ಉದುರುತ। ಕಡೆಗಣ್ಣ ನೋಟದಲೀ ॥ ಪಲ್ಲ ॥ ಮುತ್ತು ಮಾಣಿಕ ರತ್ನಾ। ಕೆತ್ತಿಸೀದ ಪುಟ್ಟೀ। ನೆತ್ತಿಯಮೇಲಿಟ್ಟು ಸುತ್ತ। ಮುತ್ತ ನೋಡುತ್ತ । ಮತ್ತವಾರಣದಂತೆ॥ ೧॥ ಕಡಗಾ ಕಂಕಣ ಚೂಡೆ। ನಡುವಿನೊಡ್ಯಾಣಾವು। ಕಡುರವ ತನ್ನಯ। ನುಡಿ ವೀಣೆಯಸ್ವರ। ವಡಗೂಡುವ ಬಗೆಯಾ ॥ ೨ ॥ ಅಡಿಗಡೀಗೆ ತನ್ನಾ। ಎಡದಾ ಸಿಂಗನವ್ವೆಯ್ಯಾ। ದಡವಿ ಮುದ್ದಿಸಿ ಬಹಳ। ತಡವಾಯಿತು ಎಂದು । ಮಡದಿರುಕ್ಮಿಣಿ ಮನೆಗೆ ॥ ೩ ॥ ಶ್ರೀಃ

**ಶ್ಲೋಕ:**— ನಾರಿರುಕ್ಮಿಣಿ ವಾರಿಜಮುಖಿಯುರೆಂಬಾ । ತಾರೆ ಮಧ್ಯದಿತನುವಿನೊಡೆಯುನ ಬಿಂಬಾ ॥ ತೋರುವಂತಿರೆ ತೋಷದಾನಂದದಿಂದಾ। ಮಾರನಯ್ಯನು ಮಂದಹಾಸದಲಿ ಬಂದಾ ॥ ೧ ॥

ರಾಗ ಶಂಕರಾಭರಣ, ಅಟತಾಳ.

ಕನಕತಟ್ಟೆಯಲಿ ಆರತಿಯನಿಟ್ಟೂ। ಕಾಂತೇಯರಷ್ಟೂ ಕರಕುಂಕುಮ ಬೊಟ್ಟೂ। ದಿನಕರಕೋಟಿತೇಜಗೆ ಹಚ್ಚಿ। ದೀಪಗಳ್ಹಚ್ಚಿ ದಿವ್ಯಕಾಂತಿಯ

ಪೆಚ್ಚಿ । ವನಿತೆಯರೆಲ್ಲರು ಬಿಳಗುತಾ ವಲಿದಾಡುತಾ । ಒಬ್ಬಾರೊಬ್ಬರು ನಗುತಾ । ವಿನಯದಿ ಶ್ರೀಲಕ್ಷ್ಮೀಕಾಂತಗೆ ವೇದಾಂತಗೆ । ವಿಶ್ವಹೃದಯ ಪೂರಿತಗೆ । ಮಂಗಳಾರತಿಯೆತ್ತಿ ಹರುಷದಿ । ಮತಿಸರದಿ ಶೃಂಗಾರ ವಿಸ್ತರದಿ ॥ ೧ ॥ ಶ್ರೀಃ ॥

ರಾಗ ಪಂತುವರಾಳಿ, ರೂಪಕತಾಳ.

ಪ್ರೌಢವಿಯು ಮೊರೆಯಿಡಲಾ ಶ್ರೀಹರಿ । ಷಡಗರದಲಿ ದೇವಕಿಗರ್ಭದಿ । ತಡಮಾಡದೆ ತವಕದಿ ಪುಟ್ಟಿ ಜಗ । ಜಟ್ಟಿ ಜಗಜಟ್ಟಿ ದನುಜರ ಕುಟ್ಟಿ । ಕಡುಧೈರ್ಯ ಕೊಟ್ಟ ಸುರಾರಿಗೆ । ಶೋಭನವೆ ॥ ೧ ॥ ಗೋಕುಲದಲಿ ಬಗೆಬಗೆಯಾಟವ । ನೀ ಕರುಣದಿಯಾಡಿದೆ ಕಂಸನ । ತಾಕಿಸಿ ನೀ ಭರದಲಿ । ನೂಕಿಸಿ ಅಸುವ ಕುಂಭಿಣಿಗೊದದು । ಲೋಕಪಾಲಕ ನೀನೆನಿಸಿದೆ ॥ ಶೋ ॥ ೨ ॥ ಧಿಟ್ಟನೆ ಸಿರಿಮಧುರಾಪುರದಾ । ಪಟ್ಟಣವು ಉಗ್ರಸೇನಗೆ । ಪಟ್ಟವನೀಗಟ್ಟಿ ಕುಬ್ಜೆಗೆ ದಯವಿಟ್ಟ । ದಯವಿಟ್ಟ ಮನ ಗುಡಿಗಟ್ಟ ಸದಯಳಿಗೆ ಭೆಟ್ಟಿಯನೆ ಕೊಟ್ಟೆ ॥ ಶೋ ॥ ೩ ॥ ಹೂಗಾರನ ಭಕ್ತಿಗೆ ಕರುಣಾ । ಸಾಗರ ನೀ ಅಕ್ರೂರನುತಲೆ । ಬಾಗಿಸು ಸುಜ್ಞಾನವ । ಭೋಗಿಸಿ ಸುಖವಾದಾ । ಸುಖವಾದಾ ಘನಮುಖವರ । ಯೋಗಿತಾನಾದಾ ನಿಜವಾಗಿ ॥ ಶೋ ॥ ೪ ॥ ದಂಡೆತ್ತಿಬಂದಾ ಮಗಧನ । ಭಂಡಾಟವಮಾಡಿದೆ ರಣದಲಿ । ದಂಡಿಸಿ ಹೊರವಡಿಸಿ ಖಂಡಿಸಿ । ಘುಡುಘುಡಿಸಿ ಘುಡುಘುಡಿಸಿ । ಅತಿಯಾರ್ಭಟಿಸಿ । ಪುಂಡ ಉದ್ದಂಡಾನೆನಿಸಿದೆ ॥ ಶೋ ॥ ೫ ॥ ಮೇಲಾದಾ ಬಲದಲಿ ತಾನು । ಕಾಲಯವನ ಬೆನ್ನಟ್ಟಿ ಮುಚುಕುಂ । ದಾಲಯದುರಿಜ್ವಾಲೆಯ । ಪಾಲನು ಮಾಡಿದಂತ ಲಕ್ಷ್ಮೀಕಾಂತಾ । ಬಾಲಗೋಪಾಲಾ ಅತಿಜಾಲಾ ॥ ಶೋ ॥ ೬ ॥ ದ್ವಾರಕಪುರಿತಾರಕ ನಿನಗೆ । ನಾರದ ಸುರಪಾರಿಜಾತವ । ತೋರಲು ಮದಬೀರಲು । ಸಾರಲು ಸತಿಗಿತ್ತೆ ಸತಿಗಿತ್ತೆ । ಸವತಿಮತ್ಸರ ನಾರೆರಿಗಿಟ್ಟೆ ವಡಂಬಟ್ಟೆ ॥ ಶೋ ॥ ॥ ೭ ॥ ಕೊರವಂಜಿಯರೂಪವ ತಾಳಿ । ಕೊರಚಾಡುವ ಸತ್ಯಭಾಮೆಗೆ । ಭರವಸಕರ ಮೊರವುತ ಅಭಯ । ಕರವಿತ್ತೆ ಕರವಿತ್ತೆ । ಅಭಯವನಿತ್ತೆ । ಸಂತೋಷವಿತ್ತೆ ಸುಖವಾಗಿ ॥ ಶೋ ॥ ೮ ॥ ಸಾಟಿಯ ಮೂಜಗದೊಳು

ನಿನಗೆ । ಹಾಟಕತನುಜನಕನೆ ನಿನ್ನಾ। ಧೀಟಕೆ ನಲಿವಾಟಕೆ ಧಾಟಕೆ ಸಂಗಾಣೆ । ಸಂಗಾಣೆವೆನುತಲಿ ನಾರಿಯು। ಕೂಟಾ ಕೋವಿದನಾ ಕೊಂಡಾಡಿದರೂ ॥ ಶೋ ॥ ೯ ॥ ಶ್ರೀ ॥

**ಶ್ಲೋಕ:—** ಕೋಮಲಾಂಗನು ಕೊರವಿವೇಷವನು ಕಳೆಯೆ । ಕಾಮಿನೀಯರು ಕಾಂತನಕಾಲ ತೊಳೆಯೆ ॥ ಭಾಮೆ ರುಕ್ಮಿಣಿ ಬಣ್ಣಿಸಿ ಹರಿಯ ಮುಂದು । ಶ್ಯಾಮಲಾಂಗನೆ ಸ್ನಾನಕೆ ಯೇಳೆರೆಂದೂ ॥ ೧ ॥

## ದ್ವಿಪದೆ.

ಪಾಲ್ಗಡಲಶಯನ ಗೋಪಾಲ ಗುಣಶೀಲ । ಬಾಲಕಿಯರಿಂತೆಂದು ಬಣ್ಣಿಸುತ ತೈಲ ॥ ಪೂರ್ಣವಿಗ್ರಹಗ್ಗರಸಿ ಪೊಗಳುತಲಿ ಸ್ಮರಿಸಿ । ವಾರ್ಣದಿಂಸ್ನಾನವನ್ನೆರಸಿ ಅನುಸರಿಸಿ ॥ ಮಡಿವಸ್ತ್ರದಿಂದಾಗ ಮಯ್ಯಾರುವಂತೆ । ಉಡಿಗೆ ಪಿತಾಂಬರವು ಉರಗಾರಿಧೊರೆಗೆ ॥ ನವರತ್ನ ಖಚಿತಾಸನವನಿಟ್ಟು ಧರೆಗೆ । ಧ್ರುವನೊಡೆಯನಿಗೆ ವಾರೆ ದುರುಬು ವಿಸ್ತರಿಸಿ ॥ ಮುಂಗುರಳನೇವರಿಸಿ ಮುನಿಜನಪ್ರಿಯಗೆ । ಕಂಗೊಳಿಸಿ ಕುಂಡಲವ ಕಂಜಲೋಚನಗೆ ॥ ಕೋವಿದೆಯರಿಟ್ಟರಾ ಕುಶಲಕೇಯೂರಾ । ಶ್ರೀವತ್ಸಲಾಂಛನಗೆ ಸಿರಿಮುತ್ತಿನ್ಹಾರಾ ॥ ದಿವ್ಯಮಾಣಿಕ ರತ್ನದೀಪ್ತಿಗಳ ಪದಕ । ಅವ್ಯಕ್ತಮೂರುತಿಗೆ ಆನಂದವಾಕ ॥ ಹಾರೈಸಿ ಕೌಸ್ತುಭಾ ಹಾರವನೆ ಹಾಕಿ । ಪೂರೈಸಿ ಮನದಿಚ್ಛೆ ಭೂನಾಥಗೌಕಿ ॥ ಭುಜಕೀರ್ತಿ ಕಂಕಣವು ಭೋಗಿಶಯನಂಗೆ । ನಿಜಕರಾಗ್ರದಿ ಪಚ್ಚೆ ನೀಲದುಂಗುರವು ॥ ನುಡಿವ ಘಂಟೆಯು ನಡುವಿನೊಡ್ಯಾಣವಿಟ್ಟು । ಸಡಗರದಿ ಕಾಲ್ಪೆಂಡೆ ಸತ್ಯಾತ್ಮಗಿಟ್ಟು ॥ ಕಾಲಲಂದುಗೆ ಗೆಜ್ಜೆ ಕಡುರವದಿ ನುಡಿಯೆ । ಮೇಲಾದ ವಸ್ತುಗಳ ಮಿಗಿಲಾಗಿ ಧರಿಸಿ ॥ ಇನಕೋಟಿತೇಜಸಿಗೆ ಇಂತು ಶೃಂಗರಿಸಿ । ಘನದರ್ಪಣವನಿಟ್ಟು ಹಿರಿಯರನು ನಮಿಸಿ ॥ ಪ್ರಕಟಕಸ್ತುರಿತಿಲಕ ಫಣೆಗೆಸೆಯೆವಪ್ಪಿ । ಸುಕಟಾಕ್ಷ ನೀಲಾಂಗ ಶೋಭಿಸಲು ಶೌರಿ ॥ ಜರತಾರಿ ಮುಂಡಾಸನಿಟ್ಟು ಶೀಘ್ರದೊಳೂ। ಮುರವೈರಿ ಶಿರಕೆ ಮುತ್ತಿನ

ಗೊಂಚಲುಗಳೂ । ಮೆರೆಯೆ ಕನ್ನಡಿಕದಪು ಮಿಂಚಿನಾಮೇಲೆ । ಕರಿರಾ
ಜವರದನಿಗೆ ಕವಚವನೆ ತೊಟ್ಟೆ ॥ ಸಿರಿದಾದದುಶ್ಯಾಲು ಪೆಗಲವ್ಯಾ
ಲುಲಿಯೆ । ಕರೆಯಲಾ ಖಗರಾಜ ಕರವನೇ ಮುಗಿದು ॥ ಯನೆಹಸಾದ
ವೆನಲ್ಕೆ ಇಂದಿರಾಪತಿಯು । ವನಿತೆರುಕ್ಮಿಣಿ ಕರದು ವಯ್ಯಾರದಿಂದ ॥
ಮುಡಿಯದಡವುತ ಗಲ್ಲವಿಡಿದು ಮುದ್ದಿಸುತ । ಬಡನಡುವಿನಾ ಜಾಣೆ
ಮಡದಿ ಮೃದುವಾಣಿ ॥ ಫಣಿವೇಣಿ ಗುಣಶ್ರೇಣಿ ಪರಮಕಲ್ಯಾಣಿ ।
ಅಣುರೇಣಿನಲಿ ಪೂರ್ಣ ಅಮಿತಸತ್ರಾಣಿ ॥ ಘನಶಿರೋಮಣಿರಾಣಿ ಗಂ
ಭೀರವಾಣಿ । ಮುನಿಸುಮಾಣಿಸೆ ಆಣೆ ಮುತ್ತುಕಟ್ವಾಣಿ ॥ ಕೊರಳೊ
ಳಿಟ್ಟೆಹ ಕುಶಲೆ ಕುಮುದಾಕ್ಷಿ ಕೇಳೂ । ಸಿರಿಸತ್ಯಭಾಮೆಯು ಸೇರ್ದ
ಸಿಂದಿರುಳು। ನಾಳೆ ಬರುವೆನು ನಾನು ಅಪ್ಪಣೆಯನೀಡೆ। ಆಲಸ್ಯಮಾಯಿ
ತೆಲೆ ಅಂಬುಜವದನೆ ॥ ೧ ॥ ಶ್ರೀಃ ॥

**ಶ್ಲೋಕ:**— ನಾನೂದಾಸಿನಾ ನಾರಿಗೇಮಾಡಿದಾರೆ । ಮಾನಾ
ವಾರದೇಮಂದಿ ಕುಂದಾಡುತಾರೆ ॥ ನಾನಾವ್ಯಾಕುಲಾ ನಾಟಿಸಿ ಹೊರ
ಳುವಾಳೂ । ಜಾಣೆಹೆಣ್ಣಿನಾ ಜನ್ಮವೂ ವ್ಯರ್ಥ ಕೇಳೂ ॥ ೧ ॥

ರಾಗ ಶಂಕರಾಭರಣ, ಅಟತಾಳ.

ಏಕಪತ್ನೀವ್ರತವಾದಾರೆ । ಇಂದಿಗೆ ನೀರೆ। ತಾಕು ಹೋರ್ಯಾಟ ತೋರೆ॥
ಬೇಕಾಗಿ ಕಾರ್ಯಮೂಲದಿ ಮೇಲೂ । ಬಿನ್ನವಿಸಾಲು। ಸೋಕಿಸಿದಳಾ
ಕೆಕೇಳೂ ॥ ನಾಕರುಣವಮಾಡಾದಿದ್ದರೆ। ನಾಥೆಗೆದಾರೆ । ನೀ ಕೇಳು
ವಿಚಾರೆ॥ ಕೂಕನಾರದನಿಲ್ಲಿಗೆ ಬಂದು। ಕುಸುಮವ ತಂದು। ಹಾಕಿದ
ಮೋಡಿಯಿಂದು॥ ಹೋಗಿಬಾಹೆನೆ ನಾನು ರುಕ್ಮಿಣಿ। ಪೊಸಜವ್ವನಿ। ಬೇಗ
ಕಳುಹೆ ಸುಮಾನೀ ॥ ೧ ॥ ಶ್ರೀಃ ॥

**ಶ್ಲೋಕ:**— ಬೇಡವೆಂಬೆನೆ ಬೇರೆಯೆನ್ನನು ಮಾಡೀ । ಕೂಡಲಾ
ಹದೇ ಕುಶಲದ್ವೈತವನೆ ಆಡೀ ॥ ಗಾಡಿಗಾರತನ ಬೇಡವೋ ದೀನ
ದಾತಾ । ಕೂಡಿ ಬಿನ್ನಹಮಾಡುವೆ ಪ್ರಾಣನಾಥಾ ॥ ೧ ॥

ರಾಗ ಶಂಕರಾಭರಣ, ಅಟತಾಳ

ಮಾರನಯ್ಯನೆ ಭೂಮಿಯು । ನೀನು ಮಾರ್ಗವು ನಾನು ॥ ಪಲ್ಲ ॥ ತೋರುತಿಹೆಯೆಂತು ನೀನೂ । ಸಾರುವ ಪಟದ ನಾಮವು ನಾನು ॥ ಕಾರುಣ್ಯಸಾಗರ ನೀನೂ । ಭೂರಿಸರಿತಾವು ನಾನೂ ॥ ೧ ॥ ಚಾರುಮಾನಸ ಚಂದ್ರಮ ನೀನೂ । ಚಂದ್ರಿಕೆ ನಾನು ॥ ಪೂರ್ಣಬ್ರಹ್ಮ ನೀನೂ । ಕಾರಣವಾದ ಪ್ರಕೃತಿ ನಾನು ॥ ೨ ॥ ಕಾರ್ಯವು ನೀನು । ಹಾರೈಸುವೆನು ನಾನು ॥ ಎಂತು ನಾನಗಲುವೆ । ಇಂದಿಗೆ ಎಂದೆಂದಿಗೆ । ಇಂಥ ನುಡಿಯ ಸುಂದರಿಗೆ ॥ ೩ ॥ ಶ್ರೀಃ ॥

ಶ್ಲೋಕ: — ಕಾಣಬಂದಿದೆ ಕನ್ನಡೀಯಾತಕಿನ್ನೂ । ಜಾಣ ನಿನ್ನರಜಗದೊಳು ವಾಸವನ್ನೂ ॥ ನಾನು ಮಾಡಿಹೆ ನಾರಿಮನಿಗ್ಹೋದರೇನೂ । ಪ್ರಾಣನಾಯಕ ಪದಕದಂತೊಪ್ಪಿಯಿಹೆನು ॥ ೧ ॥

ರಾಗ ಶಂಕರಾಭರಣ, ಅಟತಾಳ.

ಕಾಮಿನಿ ಕರದಿ ವೀಳ್ಯವನೀಡೀ । ಕಾಂತನನೋಡೀ । ಸಾನುರಾಗದಲಿ ಕೊಂಡಾಡಿ । ಸಾಮಜಗಮನೆ ಪಾದಕೆಬಿದ್ದೂ । ಸಲಿಗೆಯ ಮುದ್ದೂ ॥ ೧ ॥ ಪ್ರೇಮ ಜಲಧಿಯೊಳಿದ್ದೂ । ಕಾಮಜನಕಗೆ ದೃಷ್ಟಿಯನಿಟ್ಟೂ ಕಣ್ಣಿನ ಗುಟ್ಟೂ ॥ ಕೋಮಲೆ ಕಂಡುಬಿಟ್ಟೂ । ನೇಮದಿ ಬರದ ಚಿತ್ರದಬೊಂಬೆ । ಆದಳುರಂಭೆ ಅಮಮತೆಯೇನೆಂಬೆ ॥ ೨ ॥ ಎಂತು ನಾನಗಲುವೆ ಇಂದಿಗೆ । ಎಂದೆಂದಿಗೆ । ಇಂಥ ನುಡಿಯ ಸುಂದರಿಗೆ ॥

ಶ್ಲೋಕ: — ಕರುಣೆ ಸತಿಯುಳಪ್ಪೀ ಕರಣವೃತ್ತಿಗಳಿಗೊಪ್ಪಿ । ಹರುಷದಿ ಗರುಡನೇರೀ ಹೊರಟನು ಶ್ರೀಮುರಾರಿ ॥ ಪರಿಪರಿ ಬೆಳಕು ಪೊಳೆಯೆ ಪೂರ್ಣಸಂತೋಷದಿಂದಾ । ಹರಿ ಸಿರಿಸತಿಭಾಮಾ ಹರ್ಮ್ಯದ್ವಾರಾದಿ ನಿಂದಾ ॥ ೨ ॥ ಶ್ರೀಃ ॥

## ರಾಗ ಸೌರಾಷ್ಟ್ರ, ಆದಿತಾಳ.

ತಾವರೆಗಂಧಿಯೆ ತವಕದಿಂದಲಿ ಬೇಗಾ । ಕೋವಿದಾರನ್ನೆ ಕದವ ತೆರೆಯೇ ॥ ದಾವಾತ ನೀನಯ್ಯ ದುಡುಕುಮಾಡಲುಬೇಡಾ । ನೀವು ಪೇಳಿರಿ ನಿಮ್ಮ ಪೆಸರ ॥ ಪಲ್ಲ ॥ ವಾರಿಯೊಳಗೆ ಪೊಕ್ಕು ವೇದವ ತಂದಿತ್ತೆ । ಧೀರಮತ್ಸ್ಯನುದಾರದುಂಡೀ ॥ ಧೀರಮತ್ಸ್ಯನು ನೀನಾದರೊಳ್ಳಿತು ನಡೆ । ನೀರಿನೊಳಗೆಯಿರು ಹೋಗಯ್ಯ ಹೋಗೊ ॥ ೧ ॥ ಶರಧಿಯ ಮಥಿಸುತ್ತ ಸುರರಿಗೆ ಅಮೃತವಾ । ಕರದಿ ನೀಡಿದ ಕೂರ್ಮರಾಣೆ ॥ ಕರದಿ ನೀಡಿದ ಕೂರ್ಮನಾದರೊಳ್ಳಿತು ನಡೆ । ಸರಸಿಯೊಳಗೆಯಿರು ಹೋಗಯ್ಯಾ ಹೋಗೋ ॥ ೨ ॥ ಮತ್ತೆ ದೈತ್ಯನಕೊಂದು ಮುದದಿ ಭೂಮಿಯ ತಂದೆ । ಸತ್ಯವರಹನೆ ಸರಸಿಜಾಕ್ಷಿ ॥ ಸತ್ಯವರಹನು ನೀನಾದರೊಳ್ಳಿತು ಶಿರವ । ಎತ್ತದೆ ತಿರುಗುತಿರು ಹೋಗಯ್ಯಾ ಹೊಗೋ ॥ ೩ ॥ ಬಾಲಕಗಾಗಿ ನಾ ಬಂದು ರಕ್ಕಸನ ಕೊಂದೆ । ಲೀಲೆನರಸಿಂಹ ಲಲಿತಾಂಗಿ ॥ ಲೀಲೆನರಸಿಂಹ ನೀನಾದರೊಳ್ಳಿತು ದೊಡ್ಡಾ । ಮೇಲಾದ ಗಿರಿಯೊಳಿರು ಹೋಗಯ್ಯ ಹೋಗೊ ॥ ೪ ॥ ಪುಟ್ಟವಾಮನನಾಗಿ ಪೊಡವಿಯ ಳದು ಬಲಿಯಾ । ಮೆಟ್ಟಿದ್ದೆ ಕಾಣೆ ಮೋಹನಾಂಗೀ ॥ ಮೆಟ್ಟಿದರೊಳ್ಳಿತು ನಡೆನಡೆ ಋಷಿಗಳ । ಥಟ್ಟು ಇದ್ದಲ್ಲಿಯಿರು ಹೋಗಯ್ಯಾ ಹೋಗೊ ॥ ೫ ॥ ತಂದೆವಚನವ ಕೇಳಿ ತ್ವರಿತದಿ ಮಾತೆಯ । ಕೊಂದ ಭಾರ್ಗವ ಕೋವಿದಾನೆ ॥ ಕೊಂದ ಭಾರ್ಗವ ನೀನಾಗರೊಳ್ಳಿತು ಮುನಿಯಾ । ವೃಂದವಿದ್ದಲ್ಲಿರು ಹೋಗಯ್ಯಾ ಹೋಗೊ ॥ ೬ ॥ ಮಾನಿನಿಗಾಗಿ ನಾ ಮಲತ ರಾವಣನ ಕೊಂದೆ । ಜಾಣರಾಮನೆ ಜಲಜಮುಖಿಯೆ ॥ ಜಾಣರಾಮನು ನೀನಾದರೊಳ್ಳಿತು ಗುಂಪೂ । ವಾನರರೊಳಗಿರು ಹೋಗಯ್ಯ ಹೋಗೋ ॥ ೭ ॥ ಇದ್ದ ಗೋವಳರೊಳು ಎಲ್ಲಪರಿಯಾಡಿದ । ಮುದ್ದುಕೃಷ್ಣನೆ ಕಾಮಿನಿಯೆ ॥ ಮುದ್ದುಕೃಷ್ಣನು ನೀನಾದರೊಳ್ಳಿತು ಬೆಣ್ಣೆ । ಕದ್ದು ತಿನ್ನುತಲಿರು ಹೋಗಯ್ಯ ಹೋಗೊ ॥ ೮ ॥ ಬತ್ತಲೆಯಾಗಿ ಬಾಲೇರ ವ್ರತಗೆಡಿಸಿದೆ । ಸತ್ಯಬುದ್ಧನು ಕಾಣೆ ಜಾಣೆ ॥ ಸತ್ಯಬುದ್ಧ ನೀನಾದರೆ ಗುಡಿಯೊಳು । ನಿತ್ಯತೋರುತಲಿರು ಹೋಗಯ್ಯಾ

ಹೋಗೊ ॥ ೯ ॥ ಚೆಲುವ ತೇಜಿಯನೇರಿ ಚದುರದಿ ನಡಿಸಿದೆ। ಕಲ್ಕ್ಯ
ವತಾರ ಕಾಮಿನಿಯೆ । ಕಲ್ಕ್ಯವತಾರ ನೀನಾದರೆ ರಾವುತರಾ । ಉಲು
ಹಾದಿದ್ದಲ್ಲಿರು ಹೋಗಯ್ಯಾ ಹೋಗೋ ॥ ೧೦ ॥ ಭೂಮಿಯೊಳಲ್ಲಿ
ಪುರಿ ಭೀಮನೊಡೆಯು ಕಾಣೆ । ಭಾಮಿನಿ ಬಾಗಿಲ ತೆರಿಯೆ ॥ ಸ್ವಾಮಿ
ಕರುಣಿಸು ಯೆಂದು ಶರಣೆಂದು ಪಾದಕ್ಕೆ । ಪ್ರೇಮದಿ ಬಂದು ಯೆರಗಿ
ದಳು ॥ ೧೧ ॥ ಶ್ರೀಃ ॥

ರಾಗ ಕಾಂಬೋಧಿ, ರೂಪಕತಾಳ.

ಶ್ರೀಕಾಂತೆ ಗುಣವಂತೆ ಅತಿಶಾಂತೆ । ನಾಕರುಣವನಾಂತೆ ನೀಕಳಿಯೆ
ಚಿಂತೆ । ಕೂಕನಾರದ ಮುಂತೆ ಕುಹಕ ಮಾಡಿದನಂತೆ । ನೀ ಕಾರಿ
ಣ್ಯಾಕೆ ನಿಂತೆ ನಿಜವಾಯಿತು ಪಂಥ ॥ ೧ ॥ ಭಾಮೆ ಜಗದೊಳು ನಿನ್ನಾ
ಲಾವಣ್ಯಕೀಡಿಲ್ಲಾ । ಕಾಮನ ಮುಂಗೈಗಿಳಿಯೆ ಕನಕಪುತ್ಥಳಿಯೆ ॥
ಕೋವಿದರನ್ನೆ ಕೋಮಲಗಾತ್ರೆ ಸುಚರಿತ್ರೆ ॥ ತಾವರೆದಳನೇತ್ರೆ ಮಿತ್ರೆ
ಸತ್ಪಾತ್ರೆ ॥ ೨ ॥ ರಾಣಿ ಪಲ್ಲವಪಾಣಿ ಜಾಣೆ ಸುಮೃದುವಾಣಿ । ಕ್ಷೋಣಿ
ಯೋಳ್ ಸತ್ರಾಣಿ ಕುಶಲೆ ಸುಪ್ರಾಣಿ ॥ ಪ್ರಾಣದೊಲ್ಲಭೆ ನಿನ್ನ ಕಾಣ
ದೆಮದನನಾ । ಬಾಣಕ್ಕೆ ಗುರಿಯುಹೆನೆ ಏಣಾಂಕವದನೆ ॥ ೩ ॥ ಇಂ
ತೆಂದು ಗೋಪಾಲ ಇಳಿದು ಗರುಡನ ಪೆಗಲಾ । ಸಂತೈಸಿ ಸಖಿ
ಯಳಾ ಸಾರಿ ಅತಿಜಾಲಾ ॥ ಕಂತುಜನಕ ಸತಿಯಾ ಕರವಪಿಡಿದು
ಮತಿಯಾ । ಸಂತೋಷವನು ತೋರಿ ಶೌರಿ ಮುರಾರಿ ॥ ೪ ॥ ನಾರೀ
ಸದ್ಗುಣದವಿಹಾರಿ ಎನ್ನಯ ಮನೋ । ಹಾರಿ ನಂಬಿದ ಪ್ರೀತಿ ದೋರೇ
ಸಾಕಾರಿ ॥ ಬೀರಿ ಸತ್ಸುಖವನ್ನು ಭೂರಿಸಂಭ್ರಮದೀ ವು । ದಾರಿ ಮನ್ನಿ
ಸುಯೆನ್ನ ಕೋರಿ ವಿಸ್ತಾರೀ ॥ ೫ ॥ ಶ್ರೀಃ ॥

ರಾಗ ಸೌರಾಷ್ಟ್ರ, ಆದಿತಾಳ.

ನಿಂದು ಎಡಪಕ್ಕೆಯನೀಡಿ । ಪೆಗಲಮೇಲೆ । ಸುಂದರಿ ಮೊಗವನೀಕ್ಷಿ
ಸುತಾ ॥ ಪೊಂದಾವರೆಕರ ಪೊಂದಿ ಗಲ್ಲದಮೇಲೆ । ಮುಂದುವರಿದು
ಚುಂಬಿಸುತಾ ॥ ೧ ॥ ಮಣಿಮಯವಾದ ಮಂಚದಮೇಲೆ ಮಾಧವ ।

ಗುಣನಿಧಿ ಕುಳಿತನು ಬೇಗ ॥ ಮನುಮಥಕೇಳಿಗೆ ಮೆಚ್ಚಿಕೆ ಸಾರವ । ಅನುಕರಿಸಿದರತಿವೇಗ ॥ ೨ ॥ ನೆಲವನುಂಗುಟದಿ ನಳಿನಾಕ್ಷಿ ಬರೆವುತ । ಲಲಿತಾಂಗಿಯು ತಲೆಬಾಗಿ ॥ ಮಲಯಜಗಂಧಿ ಮಾತಾಡದೆ ಕಡೆಗಣ್ಣ । ಸುಳಿವು ಕಂಡನು ಗುಣಯೋಗಿ ॥ ೩ ॥ ಶ್ರೀ ॥

**ಶ್ಲೋಕ:**—ಏನೂಕಾರಣ ನಿಂದೆ ಚಂದಿರಮುಖೀ । ಇನ್ಯಾಕೆ ಈದುಗುಡವೇ ॥ ಪಲ್ಲ ॥ ನಾನೂ ಮಾಡಿದುದೇನು ನಾರದಮುನೀ । ತಾ ನಿತ್ತ ಕುಸುಮೊಂದವೇ ॥ ಅನಾರೀಗಿಡಬೇಕು ಯೆಂದು ನುಡಿಯೇ । ನಾನಿತ್ತರೇನಾಯಿತೇ ನೀನಾಗೀ ಬಲುನಿಂದೆಗಯ್ಯಲವಳಾ । ನಿಷ್ಠೂರ ನಿನಗಾಯಿತೇ ॥ ೧ ॥ ನಾರೀಪೇಳಿದ ನಾರದೆನ್ನ ಪೆಸರಾ । ಬಾರೆಂದು ನೀ ಕರಿಸದೇ । ನಾರೀರುಕ್ಮಿಣಿಗಿತ್ತೆ ನಿನ್ನ ಗುಣವಾ । ತೋರ್‍ಯಾಡಿದಲ್ಲೇನದೆ ॥ ಜಾರಾಚೋರನೆ ನಿನ್ನ ಜಾಲವು ವಿಧೀ । ಜಂಭಾರಿಗಳವಲ್ಲವೊ । ನಾರೀ ರೋಳತಿಹಾಸ್ಯಮಾಡಿ ಜರಿದೇ । ಈರಮ್ಯ ಬರಲಿಲ್ಲವೊ ॥ ೨ ॥ ಜಾಣೇ ನೀ ಬರದಿದ್ದ ಪತ್ರವು ಗಿಳೀ । ತಾನಿಟ್ಟು ಮರಕಡಂತೇ । ನಾ ನೋಡೂತಲೆ ಉಭಯಸಂಕಟವಹಾ । ಧ್ಯಾನಾಂತರದಿ ತೊಡಂತೆ ॥ ನೀನೀಧಾನಿಸಿ ನೋಡದೇ ತವಕದೀ । ಮೀನಾಕ್ಷಿಯುಳ ಕಳುಹಲೂ । ಅನಾರೀ ಬಲು ಗಾಡಿಕಾರಿ ಚತುರೀ । ಹೀನತ್ವವನು ತೋರ್ದಳೂ ॥ ೩ ॥ ಬಂದಾ ದೂತಿಗೆ ಬಾಯಿಮೇಲೆ ಬಡಿವೆ । ನೆಂದಾಡ್ನಳಾ ರುಕ್ಮಿಣಿ । ಅಂದಾವಮಾತನು ಕೇಳಿ ಸುಮ್ಮನಿಹದೂ । ಚಂದಾಯಿತೇ ಕಲ್ಪಣೀ ॥ ಬಂದೇನಾ ಸ್ಮರಬಾಣ ತಾಕಲು ಬಲೂ । ಬೆಂದಾಡಿದೇ ನಿನ್ನನೆ ॥ ಮಂದಾಹಾಸದಿ ಮುಂಡೆತೂಗಲು ಸಖೀ । ಮುಂಡಾಡಿದೇ ದೇವನೆ ॥ ೪ ॥ ಧಿಟ್ಟೇ ಕೇಳೆಲೆ ಒಬ್ಬರೊಬ್ಬರ ನುಡೀ । ಬಿಟ್ಟಾಡ್ವದನು ಕೇಳುತಾ । ದಟ್ಟೇಸ್ಯಾಡಿದೆ ಸುಮ್ಮನಿದ್ದೆನೆ ಸರಿ । ಗಟ್ಟಿಬ್ಬರಿಗೆ ಸಲಿಸುತಾ ॥ ನೆಟ್ಟಾನ್ಹೇಳಿದೆ ನಿಂದೆಯಾಡಿ ಛಲದೀ । ಸಿಟ್ಟಾಗಿ ನೀತಿರಿಗಿಡೆ । ಇಷ್ಟೆನ್ನಾ ಗುಣ ದೋಷವಿಲ್ಲೆಯೆನಗೇ । ಶ್ರೇಷ್ಠಾಂಗಿ ನಾಮರುಗಿದೆ ॥ ೫ ॥ ನಡುನೀರೊಳ್ಮೊಗಬಹುದು ನಾಗನ ಫಣೀ । ದಡ ಮುತ್ತ ದಾವಾಗ್ನಿಯಾ । ಎಡರಿಂಗಂಜದೆಯೈದುಕಾಲ ವಿಷವಾ । ಕುಡು ಪೋದು ಅಸಿಧಾರೆಯಾ ॥ ವಡಲಿಂಗಿಕ್ಕುವ ವಾಜಿಮಾಡಬಹುದೋ ।

ಬಿಡಲಾರಿನೋ ಮಾನವಾ । ದೃಢವಾಗೀ ಕಡುಮಾನವಿತ್ತು ಸಲಹೋ । ಸಡಗರದಿ ಕರುಣಾರ್ಣವಾ ॥ ೬ ॥ ಮಡದೀ ಇಬ್ಬರ ನುಡಿಯುಸಮ್ಮತಿ ಸದೆ ನಡುನೀರ ನಾಪೊಕ್ಕೆನೇ । ಬಿಡದೇ ಬಿಟ್ಟದಮರೆಯಪೋಗಿ ಶಿರವಾ। ಕಡುನಾಚಿ ತಗ್ಗಿಸಿದೆನೇ ॥ ನುಡಿಯಲಾರದೆ ಬಾಯಿಬಿಟ್ಟೆ ಪರರಾ। ಪೊಡವಿಂಗೆ ಕೈಯೊಡ್ಡಿದೇ । ಜಡೆಯುಂತಾಳಿಧೆ ಜಗವಬಿಟ್ಟು ವನಕೆ । ನಡದದ್ದು ನೀ ಬಲ್ಲೆಲೆ ॥ ೭ ॥ ತಪ್ಪಾದೆಂದಿಗೆ ತರುಣಿ ನಿಮ್ಮ ಕಲಹಾ । ತಪ್ಪಾಯಿತೇ ಕಾಯವೂ । ವಪ್ಪೀತೀವ್ರತಗೇಡಿಬುದ್ಧಿಹಯದಾ । ಕುಪ್ಪಳಿಕೆ ಪರ ಮೋಹವೂ ॥ ಅಪ್ಪೀಕೊಂಬೆನೆ ಅವಳಕೂಡ ಮುದದೀ । ಸುಪ್ಪಾಣಿಮುತ್ತಾಗಿರೆ । ಸುಪ್ರಾವೇಣಿ ಸುಜಾಣೆಯೆನ್ನ ಬಳಿಯಾ । ವಪ್ಪಂದದೀಕುಳ್ಳಿರೇ ॥ ೮ ॥ ಶ್ರೀಃ ॥

## ರಾಗ ನೀಲಾಂಬರಿ, ತ್ರಿಪುಟತಾಳ.

ಚಿಂತೆಯುಮಾಡುವ ಫಲವು ಇದೇನೆ । ಕಂತುಕೇಳಿಗೆ ಮನ ಕರಗದೆ ನೀನೆ ॥ ಪಲ್ಲ ॥ ಅನುಮಾನವೇತಕೆ ಮುನಿಸು ನೀವಾಣೆ ನೀ । ನೆನದಂತೆ ಮಾಡುವೆ ಮನಸಿಜನಾಣೆ ॥ ೧ ॥ ಒಂದುಹುವ್ವಿಗೆ ಮನದಂದುಗವೇನೇ । ತಂದುಕೊಡುವೆ ವೃಕ್ಷ ಚಂದಿರವದನೆ ॥ ೨ ॥ ಖಚಿತವಾದರೆ ಎನ್ನ ವಚನವ ನಂಬೆ । ರಚನೆಯ ಮಾತಲ್ಲ ರಚಿಸಿದ ಬೊಂಬೆ ॥ ॥ ೩ ॥ ನಿನ್ನ ಮಾನಾಪಮಾನವೆನ್ನದು ಕಾಣೆ । ಪನ್ನಗವೇಣಿ ಮೋಹನ್ನದ ಜಾಣೆ ॥ ೪ ॥ ಕನಕಲತಾಂಗಿ ಕಾಮನ ಮುದ್ದುಗಿಳಿಯೆ । ಅನುರಾಗದಿಂದಲಿ ಕೂಡೆನ್ನಾ ಬಳಿಯೆ ॥ ೫ ॥ ಶ್ರೀಃ ॥

## ಸೀಸಪದ್ಯ.

ಶ್ರೀನಿವಾಸನೆ ನಿನ್ನ ಸೇರಿದ್ದ ಯುವತಿಯುಳ । ಮಾನಾಪಮಾನಗಳು ನಿನ್ನದಲ್ಲೆ ॥ ದಾನವಾಂತಕ ನೀನು ದಯಮಾಡದಿದ್ದರೆ । ನಾನಾರಿಗುಸುರುವೆನೋ ಮನದಹೊಲ್ಲೆ ॥ ಮಾನಿನಿಯರೊಳಗೆನ್ನ ಮಾನವಂತಳ ಮಾಡಿ । ಆ ನಾಕಲೋಕದಾ ಪುಷ್ಪವೃಕ್ಷ ॥ ನೀನೆನ್ನಮನೆಯಲ್ಲಿ ನಿಲ್ಲಿಸಲುಯೆನ್ನ ಸುಖ । ದಾನಂದಕೇಡುಂಟೆ ದೀನಪಕ್ಷ ॥ ೧ ॥ ಹೀಗೆಂದು

ಹರಿಣಾಕ್ಷಿ ಹಿಗ್ಗಿ ರೋಮಾಂಚನದಿ । ಬಾಗಿದಾ ಶಿರವೆತ್ತಿ ಭಯನಿವಾರಿ ॥ ಪೂಗೋಲನಯ್ಯನಾ ಪುಣ್ಯಗುಣನಾಮನಾ । ಭೋಗಕಾನಂದಬಾಷ್ಪಗಳವಾರಿ ॥ ವೇಗದಲಿ ಹೊರಸೂಸಿ ವಿಶ್ವತೋಮುಖನ ಪದ । ಕಾಗುಣಾನ್ವಿತೆ ಬಾಗಿ ಸೋಗುಬೀರಿ ॥ ನಾಗಾರಿಗಮನನನುರಾಗದಿಂ ಅಭಯಕರ । ನಾಗವೇಣಿಗೆ ಕೊಟ್ಟು ನಲಿದ ಶೌರಿ ॥ ೨ ॥ ಶ್ರೀಃ ॥

ರಾಗ ರೇಗುಪ್ತಿ, ಆದಿತಾಳ.

ಮಾರನ್ನ ಚರಿತೆ । ಮಾಧವನರಿತೆ ॥ ಆರನ್ನೇ ಅಂಗಸಂಗವ ಹಾರೈಸುತಾ । ಬಾರೆಂದು ಕರವುತ ಬನ್ನಣೆಮಾಡುತ ॥ ಸಾರಿಸಾರಿಗೆ ಪ್ರಾಣಸಖಿಯೆಂದಾಡುತ । ನೀರೆ ಮನೋರಥ । ಪೂರೈಸುವ ಬಗೆ ॥ ಪಲ್ಲ ॥ ಚಂದಿರಕಿರಣನು ಚಲುವಾಗಿರೆ ಬಲು । ಮಂದಮಾರುತವಾನಂದದಿ ಸುಳಿಯೆ ॥ ಕಂದರ್ಪನು ತಾ ಕಬ್ಬುಬಿಲ್ಲಿನಲಿ । ಪೊಂದಾವರೆಶರ ಪೂಡುತ ನಲಿಯೆ ॥ ವೃಂದಭ್ರಮರಪಂಕ್ತಿ ವಿವರಿಸಿಸಿಂಜಿನಿ । ಅಂದದಿ ಕರ್ಣಪರ್ಯಂತರಯೆಳೆಯೆ ॥ ಸಂದಿಸಿ ಶುಕಪಿಕ ಸ್ವರಗಯ್ಯಲು ಗೋ । ವಿಂದವಾಮಕರದಿಂದಲೆಳೆಯೆ ಆರ ॥ ವಿಂದನಯನೆಯಳು ಹೊಂದ್ಯೆಡದೊಡೆಯಲಿ । ಚಂದದಿ ಕುಳ್ಳಿರೆ ಚದುರತನದಲಿ ॥ ೧ ॥ ಸಡಗರದಲಿ ಪೊದ್ದ ಶರಗುತೆಗದು ಕಿ । ಕ್ಕಿಡುವ ಕಂಚುಕಪುಟ ಕಿರಿಗಂಟುಬಿಚ್ಚಿ ॥ ತಡವುತಮಕರಪತ್ರವು ಬರೆದನು ಪೊಂ । ಗೊಡಕುಚದಲಿ ಘನಗುಣಮನಮೆಚ್ಚಿ ॥ ಎಡದಕೈಯಲಿ ಮುಡಿದಡವಿ ಬಲದಕೈಯ್ಯ । ಕಡುಮೋಹದಿ ಚುಬುಕಾಗ್ರಕೆ ಹಚ್ಚಿ ॥ ಅಡಿಗಡಿಗಧರದ ಅಮೃತವ ಸವಿವುತ । ಕುಡುತೆಗಂಗಳಿಯು ಮುಂಗುರಳನೆ ತಿದ್ದುತ ॥ ಕಡಲಶಯನ ಮುದ್ದು ಗಲ್ಲವ ಮುಟ್ಟುತ । ಬೆಡಗಿನಿಂದಾಲಿ ಬಿಗಿಬಿಗಿದಪ್ಪುತ ॥ ೨ ॥ ಕುಶಲದಿಬಂಧನ ದಶವಿಧಚುಂಬನ । ಸಲೆಸುಖಲೋಕನ ನಸುನಗೆಯಿಂದ ॥ ಅಸಮಸುಖನು ಷೋಡಶಕಲೆನೆಲೆಗಳ । ರಸಿಕತನದಿ ಮುಟ್ಟಿ ಉಳುಹಿದನೊಂದಾ ॥ ಶಶಿಮುಖಿ ತನು ಕಂಪಿಸೆ ಬೆವರುತ ಪರ । ವಶಗಳರವವಾಲಿಸಿ ಮುಕುಂದಾ ॥ ವಸುಧೇಶನು ವೃದುವಸನದಿ ಬೆವರಡ । ಗಿಸಲೆಚ್ಚರದಿರೆ ಎಸಗಿ

ದಂತನಖ । ರಸಕಠಿನಕ್ಷತ ರಚಿಸಲು ನೈದಿಲೆ । ಎಸಳುಗಂಗಳ ಪಸರಿಸಿದಳು ಆಬಲೆ ॥ ೩ ॥ ಶ್ರೀಃ ॥

ಸೀಸಪದ್ಯ.

ಸುದತಿ ಸುಮ್ಮನೆಯಿಹುದು ಇದುಯೇನು ಸೋಜಿಗವೆ । ಮೃದುವಾಣಿ ಫಣಿವೇಣಿ ಮುದ್ದನೀಡೆ ॥ ಮದನಕದನಾಪೇಕ್ಷೆ ಮಮತೆ ಪೂರೈಸಿತೆ । ವಿಧುವದನೆ ರತಿಸದನೆ ಎನ್ನನೋಡೆ ॥ ಹೃದಯದಲಿ ಆನಂದದುದಧಿವುಕ್ಕುವದೆಂತು । ಮದದಾನೆ ಗತಿಯಾನೆ ಮಾತನಾಡೆ ॥ ಅಧರಮಧುರವ ಕುಡಿಸು ಚದುರಚಂಪಕಗಂಧಿ । ಆದರದಿರು ಬೆದರದಿರು ಅಪ್ಪಿಕೊಡೆ ॥ ೧ ॥ ವಿಶ್ವತೋಮುಖ ವಿಶ್ವವ್ಯಕ್ತಿ ವಿಶ್ವತಬಾಹು । ವಿಶ್ವತೋಕರಚರಣ ವಿಶ್ವಮೂರ್ತಿ ॥ ವಿಶ್ವನಾಟಕ ವಿಶ್ವದಾಧಾರ ವಿಶ್ವಗುಣ । ವಿಶ್ವಚೇತನ ವಿಶ್ವವ್ಯಾಪ್ತಕೀರ್ತಿ ॥ ವಿಶ್ವದೊಳು ತುಂಬಿಹುದು ವಿಶ್ವಾತ್ಮಕನೆಯೆನ್ನ । ವಿಷಯದಿನ್ನೆನಗಾಗೊದೇನು ಪೂರ್ತಿ ॥ ವಿಶ್ವಾಸವುಳ್ಳಲ್ಲಿ ವಿನಯದಿಂ ವಶನಾಗಿ । ವಿಶ್ವೇಶನೀವೆನ್ನ ವಿಭವದಾರ್ತಿ ॥ ೨ ॥ ಶ್ರೀಃ ॥

ರಾಗ ಸೌರಾಷ್ಟ್ರ, ಆದಿತಾಳ.

ನಿಗಮಕೆ ನಿಲುಕದ ನಿರ್ಗುಣಮೂರ್ತಿಯು । ಸಗುಣರೂಪವ ತಾಳಿ ಬಂದೂ ॥ ಅಗಲದೆ ಬಂದೆನ್ನ ಅಪ್ಪಿಮುದ್ದಾಡುವ । ಮಿಗೆಭಾಗ್ಯಗಳು ನಾನೆಂದೂ ॥ ೧ ॥ ಕಮಲದಳಾಕ್ಷಿ ಕಾಂತನಮೊಗ ನೋಡಲು । ಸಮನಿಸಿತಾಗ ಸಂತೋಷಾ ॥ ಮಮತೆಯಿಂದಲಿ ನಾರಿಮಣಿಗೆ ಉಲ್ಲಾಸದ । ಭ್ರಮೆಯು ಕವಿದುದಾವೇಶ ॥ ೨ ॥ ಕುಂಭಕುಚಗಳಿಂದ ವಲ್ಲಿಬಾಹುಗಳಿಂದ । ಅಂಬುಜನಾಭನ ಕಟ್ಟಿ ॥ ರಂಭೆಮುಖ ಬಾಡಲು ಹಿಂಭಾಗವೇಣೀ । ಶಂಭುಸಖನ ಬೆನ್ನುತಟ್ಟಿ ॥ ೩ ॥ ನಗೆಯೆಂಬ ಮಲ್ಲಿಗೆ ಸಾಥಗೆಸೂಸುತ । ನಗುವಳು ನಲಿನಲಿದಾಡಿ ॥ ಬಗೆಹಣ್ಣಿಗೇ ಗಿಳಿ ಬಂದೆರಗುವಪರಿ । ಉಗುರು ಗಲ್ಲಕೆಕ್ಷತಮಾಡಿ ॥ ೪ ॥ ಮಾಣಿಕಪೋಲುವ ಜಾಣನ ಚೆಂದ್ರುಟಿ । ರಾಣಿ ಸವಿದು ಸುಖವಾಗೀ ॥ ಪ್ರಾಣಪಾನವು ಒಂದು ಗಾಣಿಸಿರತಿಸುಖ । ಖಾಣಿದಾಟಿದಳನುರಾಗೀ ॥ ೫ ॥

ಸೀಸಪದ್ಯ.

ಮದನಗೋಪಾಲ ಮಧುಮಥನ ಮಾಧವಕೃಷ್ಣ । ವಿದುರವಂದಿತ ವಿಜಯವಿಧಿಯತಾತ ॥ ಯದುಕುಲೋದ್ಧಾರ ರವಿ ವಿಧುನೇತ್ರ ಸುಚರಿತ್ರ । ಮದದಾನೆ ಮುರಿದು ಮಾವನ್ನಘಾತ ॥ ವದಗಿಮಾಡಿದೆಸ್ಮರಿಪ ವಸುದೇವ ದೇವಕಿಯ । ಹುದುಗಿದ್ದ ಸೆರೆಬಿಡಿಸಿದಧಿಕಶೂರ ॥ ಪದವ ಪಾಲಿಸೊ ಪದುಮವದನ ಭಕ್ತರಸದನ । ಸದಯಾಳು ಸಕಲಗುಣ ಸಾರಧೀರಾ ॥ ೧ ॥ ಮಡದಿ ಪತಿಪದಕೆರಗಿ ಸಡಲಿದ್ದ ಮುಡಿಗಟ್ಟಿ । ತೊಡಕಿದ್ದ ಹಾರಗಳ ನಿಡಿದುಮಾಡಿ ॥ ಕಡಗಕಂಕಣ ತಿರಿವಿ ಕಡುನಾಚಿ ಕಂಚುಕದ । ಕಡೆಗಾದ ಕಿರಿಗಂಟು ಕರವಗೂಡಿ ॥ ತಡಮಾಡದಲೆ ಕಟ್ಟಿ ಬಡನಡುವ ಸಂಹರಿಸಿ । ಸಡಗರದಿ ಶಶಿವದನೆ ಶರಗವೊದ್ದು ॥ ದೃಢದಿ ನವವಿಧಭಕುತಿ ಪೊಡವಿಪತಿಗರ್ಪಿಸುತ । ವಡನಾಡ್ವೆನೆಂದು ವಯ್ಯಾರಿಯೆದ್ದೂ ॥ ೨ ಶ್ರೀಃ ॥

ಶ್ರೀರಾಗ, ಅಟತಾಳ.

ಮಾನಿನಿ ಮಂಚವನಿಳಿದೂ । ಮನದ ವೈಲಿಗೆ ತೊಳೆದೂ ॥ ಧ್ಯಾನಾದಿನವವಿಧಾನ ಭಕುತಿ ನಿ । ಧಾನಿಸಿಮಾಡಲು ಮಾನವಂತಳೆಂದು ॥ ॥ ಪಲ್ಲ ॥ ಅರುವಿನಿಂದಲಿ ಕರವಮುಗಿದು । ಶಿರವ ಬಾಗಿದಳಾಗಾ ॥ ಗುರುವೆ ನಿನ್ನ ಧ್ಯಾನ ಸ್ಥಿರವಾಗಿ ಮನದಿ । ದೊರಕುವದೆಂತು ವಿವರವ ಪೇಳೆಂದು ॥ ೧ ॥ ಹರಣದಲ್ಲಿದ್ದ ಕರಣದವೃತ್ತಿಯಾವರಣವಾಗುತ ನಿಮ್ಮಾ। ಸ್ಮರಣೆಯಿಂದಲಿ ಚರಣಭಜನೆ ಕರುಣಿಸೆನುತ ಹರಿಣನಯನೆ ॥ ೨ ॥ ಶ್ರವಣಕೊಂಡಾಡುವಡದು । ಠವಣೆಪೇಳೆನಗಿಂದೂ ॥ ಸ್ತವನಪದದಿ ನೆವನದಾವುದು । ಪವನನೊಡೆಯ ಸವನಿಸೆನುತ ॥ ೩ ॥ ಭರ್ಚಿಯ ಮೊನೆಯ ಲೊರ್ಚಿಸಿ ತೋರುವ । ಮೆಚ್ಚಿಸುವ ತಪದಂತೆ ॥ ಆರ್ಚನೆ ಮಾಡುವ ಚರ್ಚೆಯ ಪೇಳೆಂದು । ಅಚ್ಯುತಗರ್ಚಿಯ ಪೆಚ್ಚಿಸಿ ನೋಡುತ ॥ ೪ ॥ ವಂದಾನೆ ಹಾಸ್ಯದ ಹೊಂದಾನೆ ಸಖ್ಯದ । ಬಂಧನ ಸಾರವದೆಂತೂ ॥ ನಂದನಕಂದ ಆನಂದನೆ ಆತ್ಮದ । ದಂಡನೆ ನಿನಗೆ ಹೊಂದಿಸಿದೆನೆಂದು ॥ ೫ ॥ ಶ್ರೀಃ ॥

ರಾಗ ಶಂಕರಾಭರಣ, ಅಟತಾಳ.

ನವವಿಧ ಭಕುತಿಯ ನಯದಿಂದವಮಾಡಿದ । ನವಸಾಧುಜನರ ನಾವುವ ಪೇಳುವೆ ॥ ಸವನಿಸಿ ಕೇಳೀಗ ಸಟೆಯನಾಡುವನಲ್ಲ । ನವಯುವ್ವನದ ಜಾಣೆ ನಮ್ರವಾಣಿ ॥ ಪಲ್ಲ ॥ ಶುಕನಿಂದ ಶ್ರವಣವ ಸುಲಭದಿ ಸಾಧಿಸಿ । ಪ್ರಕಟದ ಭವಗೆದ್ದ ಪರೀಕ್ಷಿತನೂ ॥ ಸಕಲವೇದಾಂತದ ಸಾರಸಂಕೀರ್ತನ । ಅಕಲಂಕ ನಾರದನರುಹಿದನೂ ॥ ೧ ॥ ಕಂದ ಪ್ರಹ್ಲಾದನು ಕುಂದದೆ ಸ್ಮರಿಸಲು । ಬಂದು ಪಾಲಿಸಿದೆ ನಾ ಬಲುಬೇಗದಿ ॥ ಇಂದಿರೆ ಕುಚಗಳ ಹೊಂದಿಸಿ ಪಾದಕ್ಕೆ । ಅಂದದಿ ಭಜಿಸಿದಳನುರಾಗದೀ ॥ ೨ ॥ ಎನ್ನನರ್ಚಿಸಿ ಮುಕ್ತಿ ಕನ್ನೆಯ ಕೈಕೊಂಡ । ಪುಣ್ಯವಂತನು ಕೇಳು ಪೃಥುರಾಯನು ॥ ಬನ್ನಣೆಮಾತಲ್ಲ ಬಹುಜಾಣನಕ್ರೂರ । ಬಣ್ಣಿಸಿ ವಂದನೆ ಮಾಡುವನು ॥ ೩ ॥ ಅಂಜದೆ ಸೇವೆಯ ರಂಜಿಸಿಮಾಡಿದ । ಅಂಜನಾಸುತ ವಜ್ರ ಪಂಜರನೂ ॥ ಕಂಜಾಕ್ಷಿ ಸಖ್ಯ ಧನಂಜಯನೆಸಗಿದ । ಸಂಜನಿಸುವ ಸತ್ವಪಂಜರನು ॥ ೪ ॥ ಬಲಿಚಕ್ರವರ್ತ್ಯಾತ್ಮ ಚಲಿಸದೆ ನೀಡಿದ । ಬಲವಂತನವನ ಬಾಗಿಲಲಿಹೆನೂ ॥ ಲಲನೆ ಕೇಳಿನ್ನೊಂದು ಬೆಲೆಯಿಲ್ಲದ ಮಾತ । ಸಲಿಸುವ ಭಕ್ತಿಗೆ ಸಿಲುಕಿಹೆನೂ ॥ ೫ ॥

ಸೀಸಪದ್ಯ.

ನಾಂ ವೈಕುಂಠದಲಿ ನಾನಿಲ್ಲ ಯಜ್ಞದಲಿ । ನೀರೆ ಸನ್ಯಾಸಧರ್ಮದಲಿ ಇಲ್ಲ ॥ ಭೂರಿತೀರ್ಥಗಳಲ್ಲಿ ಭುಕ್ತಿದೂರದಾ ತಪದಿ । ತೋರುತಿಹ ಡಂಭಕಸ್ಥಳದಲಿಲ್ಲ ॥ ಹಾರೈಸಿರಜತಮೋಽಹಂಕಾರ ಕರ್ಮಕ್ಕೆ । ದೂರನಾನಿಹೆ ಕೇಳು ನೀತಿಯನ್ನು ॥ ಸಾರಿಪೇಳುವೆನೀಗ ಸದ್ಭಕ್ತಿಯಿಂದೆನ್ನ । ಸಾರಕೀರ್ತನೆಗೈವ ಸ್ಥಳದಲಿಹೆನು ॥ ೧ ॥ ವಿಷಯಭ್ರಮೆಗೊಳಗಾಗಿ ವಿನಯಮಾಡಲಿಬೇಡ । ಶಶಿವದನೆ ವೇದಾಂತಸಾರಕೇಳೂ ॥ ಹಸನಾಗಿ ನಿನ್ನೊಳಿಹ ಹಂಸನಿಂದಾದಮತಿ । ಪಸರಿಸುವ ಪ್ರಕೃತಿಗುಣ ಇಂದ್ರಿಯಗಳೂ ॥ ಬೆಸನಾಗಿ ಒಂದೊಂದು ಅಸಮಸುಖಕೆಳಸಿ ಮನ । ಸಸುಖ ಜ್ಞಾನದ ಮಾರ್ಗ ಸಮಯದಲೆ ॥ ನಿಶಿತಮರವಿಗೆ ಬಿದ್ದು ನಿಜವ ಕಳೆಯಲುಬೇಡ । ಬಿಸಜಾಕ್ಷಿ ಬಿಂಕವನು ಬಿಟ್ಟುಬಾಳೆ ॥ ೨ ॥ ಶ್ರೀಃ ॥

## ವಾರ್ಧಿಕಷಟ್ಪದಿ.

ಹರಿಯಿಂತು ಕರುಣಿಸಲು ಪರಮ ಆಹ್ಲಾದದಿಂ। ಸರಸಿಜಾಕ್ಷಿಗೆ ಶ್ರವಣ ದೊರಕಿ ರೋಮಾಂಚನವು। ಶರೀರದಲಿ ಗುಡಿಗಟ್ಟಿ ಹರುಷಾಬ್ಧಿಯೊಳು ಮುಳುಗಿ ಬೆರತಾಗಿ ತರುಣಿರನ್ನೇ॥ ಬರದ ಚಿತ್ರದಬೊಂಬೆ ತೆರನಾಗಿ ನಯನದಲಿ। ಸುರಿಯಲಾನಂದಜಲ ವರೆಘಳಿಗೆ ಮೈಮರೆದು। ಸರಸ ತಿಳಿವಿಕೆಯಿಂದ ಗರುಡಗಮನನ ನೋಡಿ ಕರಮುಗಿದಳು ಕಾಮಿನೀ॥ ೧॥ ಅಸುರರಟ್ಟುಳಿಗೆ ಧರೆ ಉಸುರಲಾದೇವಕಿಯ। ಬಸುರೊಳವತರಿಸಿ ಅನಿಮಿಷರ ಮನದೊಳಗಿದ್ದ। ಕಸರುಚಿಂತೆಯ ಕಳದು ಬಿಸರುಹಾಕ್ಷಿಯರ ಮನೆ ಮೊಸರು ಕದ್ದವನೆನಿಸಿದೆ॥ ಪೆಸರಾದ ಠಕ್ಕರಕ್ಕಸರ ಕಂಸನ ಸಹಿತ। ಕೊಸರಿಕೊಂದಮುಹತ್ತು ದೆಶೆರಚಿಸೆ ನಿಮ್ಮಮನ। ಶಶಿದತ್ತೋತ್ಸಹಕೀರ್ತಿ ಕುಸರವನೆ ಕೊಂಡಾಡುತಸುರಮ್ಮತರಳಾದೆನೊ॥ ೨॥ ಕರುಣಗುಣ ಕೌಸ್ತುಭಾಭರಣ ದೀನೋದ್ಧರಣ। ತರಣಿಕೋಟಿಪ್ರಕಾಶ ತರುಣಗಾತ್ರವಿಲಾಸ। ಧರಣಿಚೋರನ ಹನನ ಅರುಸಣಖನತಜನನ ಮರಣಸಂಹರಣನೆಂದೂ॥ ಹರಿಣಾಕ್ಷಿ ಶ್ರೀಹರಿಯ ಚರಣವನು ಪರಿಪರಿಯ। ಸ್ಮರಣೆಗೈದು ವಿವೇಕ ಕರಣವೃತ್ತಿಗಳೇಕೆ। ಪರಿಣಾಮದಲಿ ಮಾಡಿ ಹರಣಸುಖದೊಳಗಾಡಿ ತರುಣಿ ತತ್ವಾರ್ಥಭರಣೀ॥ ೩॥ ವೇದಗಳಿಗಾಧಾರನಾದ ಮಧುಸೂದನ ವಿ। ನೋದ ಘನಯಾದವನೆ ಮೇದಿನಿ ವಿರೋಧಿಗಳ। ಭೇದಿಸಿದ ಗೋಧರನೆ ನಾದಹಿತನಾದಿಯೆಂದಾಧೀರೆಯಾದರಿಸುತಾ॥ ಸಾಧುಮನವಾದರಿಗೆ ಸಾಧನವಿನೋದಿಸುವ। ಹಾದಿಯುಂಬಾದರದಿ ಶೋಧಿಸುತ ಮಾಧವನ। ಬೋಧಾನುವಾದದಲಿ ಮೋದಗುಣ ಶ್ರೀಧರನ ಪಾದವನು ನಾರಿಕುಚದೀ॥ ೪॥ ನಂದನ್ನ ಕಂದ ಗೋವಿಂದಾರವಿಂದದೃಶ। ಸಿಂಧುವಿನ ನಂದನೆಯ ಸುಂದರಕೆ ಸಂದುಮನ। ಹೊಂದಿ ಸುರಮಂದಿರದಿ ಚಂದವಾದೆಂದು ನಲವಿಂದಲಾಯಿಂದುವದನೇ॥ ನಿಂದು ಕರದ್ವಂದ್ವದಲಿ ವಂದಿಸುತ ಗಂಧ ಪೂ। ವೃಂದವಾನಂದದಿಂದ್ದೊಂದಿಸಿ ಮುಕುಂದನಿ। ನ್ನಿಂದ ಭವ ಬಂಧನೆತ

ಮಂಥ ಪರಿವಂದ ನಿನ್ನಿಂದ ಮಾಡೆಂದ್ಬರ್ಚಿಸೀ ॥ ೫ ॥ ಉಡುಪತಿಯ ಪಡೆದಂಥ ಕಡಲವುನೆ ಒಡೆಯನೆಂ। ದಡಿಗಡಿಗೆ ದೃಢಭಕ್ತಿ ವಡರಿಸುತ ಲಡಿಗೆರಗಿ। ಒಡನೊಡನೆ ನುಡಿನುಡಿದು ಬೆಡಗಿನಲಿ ಮಡದಿಮಣಿ ಸಡಗರದಿ ಪೊಡವಿಮೇಲೆ ॥ ನಿಡದಾಗಿ ಬಿಡದೆನ್ನ ಕಡೆಹಾಯಿಸೆಡರಡಲಿ। ತೊಡರದಲೆ ಇಡುಸಾಧು ಪಡೆಯೊಳಗೆ ಗಡಣದಲಿ। ತಡಿಯದಲೆ ಜಡಬುದ್ಧಿ ಕೆಡುವಮತಿ ಕೊಡುಯೆನುತ ಪೊಡಮಟ್ಟು ದೃಢಹೊಂದಿಸೀ ॥ ॥ ೬ ॥ ರವಿಕುಲಾಧಿಪಗೆ ಲಕ್ಷ್ಮವನಿಟ್ಟು ಮುದ್ರೆಯನು। ಸವನಿಸುತ ಸಾಕ್ಷಿಯಲಿ ಭವಸಾಗರವ ದಾಟಿ। ಸುವಿಲಾಸವನದೊಳಗೆ ಶಿವಕರದ ಸೀತೆಯನು ತವಬೆಳಗಿನೊಳಗೆ ಕಂಡೂ ॥ ಸವಿಯಾದ ಅಮೃತಫಲ ಸವಿದು ಸಿದ್ಧಿಯನಿವಹ। ಜವಗೆಡಿಸಿ ಸುಜ್ಞಾನ ಹವಿಯಿಂದಹಂಕಾರ। ದವನಿ ಲಂಕೆಯ ದಹಿಸಿ ಪವನಸುತನಂತೆ ದಾಸ್ಯವಮಾಡಿ ಸತ್ಯಭಾಮೇ ॥ ೭ ॥ ಶರೀರವೇ ಕುರುಕ್ಷೇತ್ರ ಕುರುಪತಿಯು ಪ್ರಕೃತಿಸುತ। ವರನಿವರ್ತಿಯ ಮಕ್ಕಳರುವೆಂಬ ಪಾಂಡವರ। ನರನಂತೆ ನಾದಿಮಣಿ ಹರಿಯೊಡನೆ ಸಖ್ಯತನ ದೊರಕಲಾ ಷಡುರಥಗಳೂ ॥ ಅರಿಷಡ್ವರ್ಗದಂತೆರಪಿಲ್ಲದಲೆ ಕವಿಯೆ। ತರಿದೊಟ್ಟೆಧರ್ಮನೆ ಧೊರೆಯೆಂದು ನಿಶ್ಚೈಸಿ। ಸಿರಿಪಾರಿಜಾತದಾತುರಗಧ್ವರವ ಜಯಿಸಿ ಮೆರೆವೆನೆಂದಬುಜವದನೆ ॥ ॥ ೮ ॥ ಕಾಮಿನಿಯು ಬಲಿಯಂತೆ ಕಾಮ್ಯಸಿದ್ಧಿಗೆಯಜ್ಞ। ತಾಮನದಿ ಮಾಡಿರಲು ವಾಮನನೆ ಬಂದತೆರ। ನಾಮುರಾಂತಕ ಬಂದು ಕೋಮಲೆಗೆ ಕೊಡು ದಾನ ಕಾಮಕೇಳಿಯೊಳೆಂದೆನೇ ॥ ತಾಮರಸದಳನಯನೆ ತಾ ಮುದದಿ ಭಕ್ತಿಯಲಿ। ಭೂಮಿಕಾಯವಮಾಡಿ ವ್ಯೋಮವಚನವ ನೀಡಿ। ಪ್ರೇಮಮನ ವಡಗೂಡಿ ನೇಮದಲಿ ಎನ್ನಲ್ಲಿ ಸ್ವಾಮಿ ನೀನಿರುಯೆಂದಳೂ ॥ ೯ ॥ ಶ್ರೀಃ ॥

**ಶ್ಲೋಕ:— ಬಾಲೆ ನವವಿಧ ಭಕುತಿ ನಯದಿಂದಮಾಡಿ। ನೀಲಾವರ್ಣನ ನಿಜದಿ ಮೆಚ್ಚಿಸುತ ಪಾಡಿ ॥ ಪಾಲಿಸೆಂದು ಗೋಪಾಲನ ಸ್ತುತಿಸಲಾಗಾ। ಕೊಳೀಕೂಗಿತೂ ಕೋಮಲೆಯೆದ್ದು ಬೇಗಾ ॥ ೧ ॥**

ರಾಗ ಭೈರವಿ, ಆದಿತಾಳ.

ಕೋಳಿಕೂಗಿತು । ಕಾಳಹೋಯಿತೂ ॥ ಸೋಳಾಸಾಸಿರ ನಾರಿಯು । ರಾಳೀ ರಂಗನಾಥನಪಾದ ವಿ । ಶಾಲ ನೋಡುವೆವೆಂದೂ ಬಂದೂ ॥ ॥ ಪಲ್ಲ ॥ ಪಕ್ಷಿಗಳ್ಹೆಚ್ಚಿ ಪಕ್ಕವು ಬಿಚ್ಚಿ । ಈಕ್ಷಿಸುತಿವೆ ದೆಸೆದೆಸೆಗಳ॥ ಪಕ್ಷಿಗಮನನಾಪೇಕ್ಷದಿ ಪದುಮದ । ಳಾಕ್ಷಿಯರೊಡಗೂಡಿ ಪಾಡಿ ॥ ೧ ॥ ತಾರೆಗಳಡಗುತ ತಾವರೆಯರಳುತ । ಬೀರಿಭ್ರಮರಝೇಂಕಾರವೂ ॥ ವಾರಿಜನಯನನ ವಸುದೇವ ತನಯನ । ನೋರೆನೋಡುವೆನೆನುತಾ ವಿನುತ ॥ ೨ ॥ ತರುಣಿಯರೆಲ್ಲಾ ತವಕದಿ ಸೊಲ್ಲಾ । ಮೆರೆವುತ ಮಣಿಮಯ ಗದ್ದುಗೇ ॥ ವರಪೀಠದಿ ಶ್ರೀಕೃಷ್ಣನ ಕೂಡಿಸಿ । ಸರಸಿಜಪದತೊಳೆದೂ ನಲಿದೂ ॥ ೩ ॥ ಪದುಮನಯನೆಯರು ಮದಗಜನಡೆಯರು । ಪದುಮನಾಭನ ಕೊಂಡಾಡುತಾ ॥ ಪದಗ ತ ಸೇವೆಗೆ ವನಿತೆಯರೆಲ್ಲಾ । ಚದುರತನದಿ ಪಾಡಿ ಗೂಡಿ ॥ ೪ ॥ ಚಂದದಿ ಕುಳಿತಿರೆ ಇಂದ್ರನು ಬಂದು । ವಂದಿಸಿ ಕರಗಳ ಮುಗಿದನೂ ॥ ಮಂದರಧರ ಗೋವಿಂದ ಪಾಲಿಸು । ಯೆಂದು ನಿಂದನುನತನಾಗಿ ಬಾಗಿ ॥ ೫ ॥ ಶ್ರೀಃ ॥

ಸೀಸಪದ್ಯ.

ಅಮರಮುನಿಗಣವಂದ್ಯ ಅಮಿತಗುಣಗಣಸಾಂದ್ರ । ಕಮಲಾಕ್ಷ ಕರಿವರದ ಕಲುಷದೂರ ॥ ಕಮಲಸಂಭವಜನಕ ಕಮಲವಾಸಿಯ ಕಾಂತ । ಕಮಲಾಪ್ತ ಶತಕೋಟಿ ಕಳವಿಹಾರ ॥ ವಿಮಲಾಂಗ ಭವಭಂಗ ವಿದುರಪ್ರಿಯ ವಿಶ್ವೇಶ । ಸಮುನಿಸೆನ್ನಯ ಮನಃಸತ್ಯವಾಕ ॥ ಸುಮನಸರ ಸೌಭಾಗ್ಯ ಕ್ರಮಗೆಡಿಸಿ ಮುರನರಕ । ರೆಮಗೆಕಾಡಲು ಬೆದರಿತಮರಲೋಕಾ ॥ ೧ ॥ ಮಂಡಲಕೆ ಮಹಯೋಗ್ಯಮಯವಾದ ಸತ್ತಿಗೆಯ ಕೊಂಡ್ಯೊದು ತೋರಿದರು ಕ್ರೂರಖ್ಯಾತಿ ॥ ಭಂಡುಮಾಡುತ ನಮ್ಮ ಬಳಿಲಿದ್ದ ವಸ್ತುಗಳ । ಕಂಡುಬಿಡಲಿಲ್ಲಷ್ಟೆಯೆನ್ನ ಮಾತೆ ॥ ಕುಂಡಲವ ನಪಹಂಸಿ ಕುಂಭಿನಿಯು ಅರಸುಗಳ । ದಿಂಡುದರಿದರು ದಿವ್ಯವೃಂದ

ನಾರಿ ॥ ಗಂಡನಾಗುವೆನೆಂಬ ಗರ್ವವನು ಸಂಹರಿಸಿ । ಚಂಡವಿಕ್ರಮ ಬೀರು ಚಮರಶೌರಿ ॥ ೨ ॥ ಶ್ರೀ ॥

ರಾಗ ಪೂರ್ವಿ, ರೂಪಕತಾಳ.

ಜೀವಿಸುವದರಿಂದಾಯಿತು ಜೀಯ್ಯಾ । ನಮ್ಮ । ದೇವಲೋಕದಲ್ಲಿದ್ದ ಶ್ರೀಯಾ ॥ ಸೇವೆ ದೈತ್ಯರಿಗಾಯಿತೀಗಾ । ಸ್ವಾಮಿ । ನೀವದಗು ಕಾರ್ಯಕ್ಕೆ ಬೇಗಾ ॥ ೧ ॥ ಅರಿದು ಆ ರಕ್ಕಸರಗ್ರಾಮಾ । ಶಸ್ತ್ರ । ದುರವಣಿಪ ದುರ್ಗವದುಸೀಮಾ ॥ ಉರಿವ ಪಾವಕದ ಪಾಶದಿಂದಾ । ಪರಿಘ । ತೆರಪಿಲ್ಲದಿರವು ಬಹುಚಂದ ॥ ೨ ॥ ನಮಗೆ ದುರ್ಘಟವಾದ ತಾನೂ । ಸ್ವಾಮಿ । ನಿಮಗೆ ತೃಣಸಮವಲ್ಲದೇನೂ ॥ ಸುಮನಸರ ಸ ಖವು ನಿಮದಲ್ಲಿ । ನಾವು । ಕ್ರಮಗೆಟ್ಟ ಕಾರ್ಯವನು ಬಲ್ಲೆ ॥ ೩ ॥ ಅರ್ಥದಿಂದಭಿಮಾನದಿಂದಾ । ಕೆಟ್ಟು । ವ್ಯರ್ಥವಾಯಿತು ನಮ್ಮದಂದಾ ॥ ತೀರ್ಥರೂಪ ಪದಾಬ್ಜಯುಗಳಾ । ನೀನು । ವರ್ತಿಸುವೆ ನರನಾಟಕಗಳಾ ॥ ೪ ॥ ಈಪರಿಯ ಸ್ತುತಿಸಿ ಶ್ರೀಧರಗೆ । ಇಂದ್ರನು । ಶ್ರೀಪಾದಪದುಮಕ್ಕೆ ಎರಗೆ ॥ ಆಪರಮಪುರುಷನತಿವೇಗಾ । ಅಪ್ಪಿಸ । ಲ್ಲಾಪದಿಂ ಸಂತೈಸಿದಾಗಾ ॥ ॥ ೫ ॥ ನಾಳಿನಾ ದಿನದೊಳಗೆ ಅವನಾ । ಕೋಪದಲಿ । ಸೀಳಿ ಸಂಹರಿಸುತಲಿ ಜವನಾ ॥ ಆಲಯವ ಪೊಗಿಸುವೆನು ಸಿದ್ಧಾ । ಯೆಂದು । ನೀಲಮೇಘಶ್ಯಾಮನೆದ್ದಾ ॥ ೬ ॥ ಶಕ್ರನ್ನ ಕಳುಹಿಸುಖವೆರಸಿ । ಶಂಖ । ಚಕ್ರಧರ ಗರುಡನ್ನ ಸ್ಮರಿಸೀ ॥ ಚಕ್ಕನೆವಿಹಗಪತಿ ಬಂದೂ । ತನ್ನ । ಪಕ್ಕವನೆ ಪಸರಿಸಿದನಿಂದೂ ॥ ೭ ॥ ಶ್ರೀ ॥

ರಾಗ ಪಂತುವರಾಳಿ, ಆದಿತಾಳ.

ಗರುಡನನೇರಿದ ಗಂಗಾಜನಕಾ । ಗಮಕದಲಿ ಕನಕಾ ॥ ಗಿರಿಧೊರೆಸತಿ ಸಹಿತರಿಗಳ ಕೆಣಕಾ ॥ ಪಲ್ಲ ॥ ಕೊರಳಕೌಸ್ತುಭ ಕೇಯೂರಾ । ಕೋಮಲಾಂಗದಿ । ವಿರಳಪದಕ ಮುತ್ತಿನ್ಹಾರಾ । ವಿಶ್ವವನೆಲ್ಲಾ । ಮರುಳುಮಾಡುವ ಮನೋಹಾರಾ । ಮಾಯಾವಿಹಾರಾ ॥ ಬೆರಳುಂಗುರ ಎಳೆದಳಿರಂತ ಧರದಿ । ತರಳೆಯ ನುಡಿಸುತ । ಕುರುಳನುತಿದ್ದುತಾ । ದುರುಳರಕ್ಕಸರನು

ಉರುಳಿಸಿ ಉದರದ । ಕರುಳು ಬಗೆವದಕೆ ತೆರಳಿದೆನೆಂದು ॥ ೧ ॥ ಬಿಗಿದೂ ಕಟ್ಟಿದ ಕಾಸಿದೊರೆ ಬಿಂಕವನೆಸಗಿ । ನೆಗದುಕಟ್ಟಿದುತುರುಬು ವಾರೆ ನಿಜವಾದಾಶಾರ್ಙ । ಉಗಿದೂ ಚಕ್ರದಬೆಳಗೂ ಬೀರೆ ಉನ್ನತದಿ ಶೌರಿ ॥ ನಗಧರ ಶಂಖವ ತೆಗದೂದಲುಭಯ । ಬಗದಸುರರವಾಣ ಹೊಗದತಿ ಶೌರ್ಯಕೆ । ಜಗದುದರಗೆ ಪನ್ನಗಧರವಿಡಿಸುರ । ಚಿಗಿದ ಸಂತೋಷದಿ ಮುಗಿದರೆ ಕರವಾ ॥ ೨ ॥ ವೃಂದಾದೇವತೆಗಳು ಚೋದ್ಯಾ ವಿವರಿಸುವೆವೆಂದು । ದುಂದುಭಿ ಭೇರಿಯ ವಾದ್ಯಾ । ಧೋಂಧೋ ಯೆಂದೂ ಸಾರಿ । ನಿಂದರು ವೇದಾಂತವೇದ್ಯಾ ನೀನೇ ಪ್ರತಿಪಾದ್ಯಾ ॥ ಮಂದರಧರ ಗೋವಿಂದ ಯಶೋದೆಯ । ಕಂದ ಮುಕುಂದ ಆನಂದ ದಯಾನಿಧೆ । ಹೊಂದಿಸು ನಮ್ಮನು ಸುಂದರವಿಭವಕೆ । ಯೆಂದು ಪೊಗಳಲು ಪುರಂದರವ್ರಾತ ॥ ೩ ॥ ಶ್ರೀಃ ॥

## ರಾಗ ಮುಖಾರಿ, ಆದಿತಾಳ.

ಹಾರಿದ ಗರುಡನು ಹಾರಿದಾ । ಬಿಂಕ । ತೋರಿದ ಸತ್ವದಿ ಬೀರಿದ ವೇಗವ ॥ ಪಲ್ಲ ॥ ಪಕ್ಕದೊಯಿಲಿಗೆ ದಶದಿಕ್ಕು ಬೆದರಲಾಗಾ । ಉಕ್ಕಿ ತುಳುಕಿತು ಉದಧಿಬೇಗಾ ॥ ಸೊಕ್ಕಿದ ಖಳರೆದೆ ಇಕ್ಕಡಿಯಾಗಲು । ಗಕ್ಕನೆ ದಿವಿಜರು ಘಾಬರಿಯಾಗೆ ॥ ೧ ॥ ಸೃಷ್ಟಿಯು ನಡುಗಿತು ಶೇಷ ತಲೆಯುಬಾಗಿ । ಅಷ್ಟದಿಗ್ಗಜಗಳು ಅದುರಿದವೂ ॥ ಬೆಟ್ಟಗಳುದುರಲು ಭೀಕರವನು ಜಗ । ಜಟ್ಟಿತೋರಲು ಜಗ ಜಜ್ಝರಿತಾಗೆ ॥ ೨ ॥ ಉಲ್ಲಾಸದಿ ಸುರರೆಲ್ಲ ಕರವಮುಗಿ । ದೊಲ್ಲಭ ರಕ್ಷಿಸು ರಕ್ಷಿಸೆನೇ ॥ ಬಲ್ಲಿದ ಖಗಕುಲ ಮಲ್ಲನು ಹಾರ್ಭಟ । ದಲ್ಲಿ ತವಕದಿಂದ ಖುಲ್ಲರಪುರಕೆ ॥ ಹಾರಿದ ॥ ೩ ॥ ಶ್ರೀಃ ॥

## ರಾಗ ಶಂಕರಾಭರಣ, ದ್ವಿತ್ರಾಳ.

ಕಂಡನು ಹಿಮಗಿರಿಯಾ । ಮಂಡೆಯುಮೇಲಿದ್ದಾ ॥ ಪುಂಡರಗ್ರಾಮ ಉದ್ದಂಡಪ್ರಾಗ್ಜ್ಯೋತಿಷ । ಮಂಡಲ ಮಾಧವನೂ ॥ ಪಲ್ಲ ॥ ಸರ್ಪಗಾಳಾವರಿಸೀ । ಇಪ್ಪಾಕಲ್ಪದ್ರುಮವೂ । ತಪ್ಪದೆ ಲೋಭಿಯ । ಕೊಪ್ಪಂಗೆಯ

ಲ್ಲಿದ್ದ । ಒಪ್ಪುವ ಧನದಂತೆ ॥ ೧ ॥ ಬಲುಪೊಸಳಿದ್ದ ಮಡುವೊ । ಕುಲ ಹೀನಾ । ವನಿತೆಯಲಿ ಚಲಿವಿಕ್ಯೊ । ವೈರಾಗ್ಯ । ನೆಲೆಗೊಳ್ಳದ ಮೋಕ್ಷ ಸಲಿಸುವ ತೆರನಂತೆ ॥ ೨ ॥ ಸಿಟ್ಟಿದ್ದಶಮೆಯಂತೇ । ಪಟ್ಟಣದಾ । ಸುತ್ತಾ । ಬೆಟ್ಟಪಾಶಜಲ । ದಟ್ಟಣೆ ಶರಶಿಖಿ । ಕಟ್ಟಿದಪರಿಘಗಳೂ ॥ ೩ ॥ ಶ್ರೀಃ ॥

ರಾಗ ಶಂಕರಾಭರಣ, ಅಟತಾಳ.

ಗೆಲಿದಾನೂ । ರಕ್ಕಸರನು ಗೆಲಿದಾನೂ । ಗೆಲಿದಾನು ವನಿತೇರಿಗೊಲಿದಾನು ಸುರರಿಗೆ । ಸಲಿಸುತ ಸಂತೋಷ ಜಲರುಹನಾಭನು ॥ ಪಲ್ಲ ॥ ಗದೆಯಿಂದ ಬೆಟ್ಟಗಳೊಡೆದೂ । ಕೃಷ್ಣಾ । ಬೆದರಾದೆ ವಳಪೊಕ್ಕು ನಡೆದೂ । ಶರಗ । ಳುದುರಿಸಿ ಶಾರ್ಙದಿಂದ್ಹೊಡದೂ । ಪರಿಘ । ಮೆದೆಗಳ ಮೋರೆಯ ಕಡಿದೂ । ಘನ । ಉದಕಾದಲಾಗ್ನಿಯ ಹುದುಗಿಸಿ ಶಿಖಿಯಿಂದ । ಕುದಿಸಿ ಅಟ್ಟಿಸಿ ಜಲ ಪದುಮದಳಾಕ್ಷನೂ ॥ ೧ ॥ ಚಕ್ರಾದಿ ಪಾಶವ ಹರಿದೂ । ತ್ರಿ । ವಿಕ್ರಮ ವಿಜಯವ ಮೆರದೂ । ಆಗ । ಶಕ್ರಾರಿ ಮುರನನ್ನು ತರಿದೂ । ಪಾ । ರಾಕ್ರಮ ಕೊಂಡಾಡಲರಿದೂ ॥ ಅಕ್ರೂರವರದಾನು ವಕ್ರದೈತ್ಯರಿಗಾಗೆ । ಶುಕ್ರಾಗೆ ದುಗುಡವತಿಕ್ರಮವಾಯಿತು ॥ ೨ ॥ ಮುರನಮಕ್ಕಳು ಬಂದು ತುಳುಕೆ । ಅವರ । ಭರದಿ ಕೆಡಹಿದ ನೆಲಕೆ । ವದಗಿ । ನರಕನಾಹವದ ಬೆಂಬಲಕೆ । ನಿಂದು । ಗರುಡಾರೂಢನಮುಂದೆ ಛಲಕೆ ॥ ನಿರುತ ಮನವಮಾಡಿ ಪರಿಪರಿ ಶರಗಳ । ಸುರಿಯಲವನ ಸತ್ವ ತರಿದಿಟ್ಟು ತವಕದಿ ॥ ೩ ॥ ಖಗಪತಿ ರೋಷವ ತಾಳೀ । ತನ್ನ । ಉಗುರಿಂದ ಅಸುರರ ಸೀಳಿ । ತೆರದ । ಮೊಗದಿಂದ ರಣದೊಳು ಧಾಳೀ । ತೋರೆ । ಗಗನಕಡರಿತು ಕೆಂಧೂಳೀ ॥ ನಗಧರ ನರಕನ ಬಗೆದು ಸಂಹರಿಸಾಲು । ಪೊಗಳುತ ಹರಿಗೆ ಪುಷ್ಪಗಳಮರರು ಸೂಸೆ ॥ ೪ ॥ ದೇವೇಂದ್ರಗಿತ್ತು ಸತ್ತಿಗೆಯಾ । ಭೂ । ದೇವಿಮೊಮ್ಮಗಗೆ ನಂಬಿಗೆಯಾ । ಕೊಟ್ಟ । ನಾವಿಭವಕೆ ಸಿರಿಮಿಗೆಯಾ । ವೃಂದ । ಭಾವೆಯರಿದ್ದಂತಗೇಯಾ ॥ ಕಾವುತೀಹರಬಿಡಿಸ್ಯಾವನಿತೆಯರಿಗೆ । ಹಾವಭಾವವ ತೋರಿ ಕೋಖಿದ ನಲಿವುತ ॥ ಗೆಲಿದಾನು ರಕ್ಕಸರನು ಗೆಲಿದಾನೂ ॥ ೫ ॥ ಶ್ರೀಃ ॥

ಸೀಸಪದ್ಯ.

ಮನುಮಥನ ಪಿತನೆಂದು ಮಾನಿನಿಯರೆಲ್ಲರೂ । ಮನದೊಳಗೆ ವಂದಿಸುತ ವಿನಯದಲ್ಲಿ ॥ ಅನುರಾಗದಿಂದಿರಲು ಅಜನಪಿತನವರಿಂಗೆ । ವಿನಯದಿಂದತಿಪ್ರೇಮಪುಳಕದಲ್ಲಿ ॥ ಅನುನಯದಿ ಮನ್ನಿಸುತ ಅಂದಣಗಳೊಳಗವರ । ಘನಸೊಬಗಿನಿಂದಿರಿಸಿ ಗಮಕದಿಂದ ॥ ಸನುಮತದಿ ದ್ವಾರಕಾ ಸ್ಥಳಕೆಬಿಜಯಂಗೈಸಿ। ಅನಿಮಿಷರಿಗಿತ್ತನಾನಂದ ಚಂದಾ ॥ ೧ ॥

ರಾಗ ಪಂತುವರಾಳಿ, ಆದಿತಾಳ.

ಬಂದನು ಭಕ್ತರಪ್ರೀಯಾ । ಭಾವಜನಯ್ಯಾ । ವೃಂದದೇವತೆಗಳ ಕೈಯಾ ॥ ವಂದಿಸಿಕೊಳಲಾನಂದ ದಯಾಸಿಧಿ । ಚಂದದಿ ಗರುಡನ ಸ್ಕಂಧವನೇರಿ ॥ ಪಲ್ಲ ॥ ದ್ವಿಜರಾಜ ದಿವಿಜಪುರಕೆ ಹಾರೆ। ದಿ। ಗ್ವಿಜಯದಿ ಶೌರಿ। ನಿಜಶಂಖನಾದಾವು ಬೀರೆ। ವ್ರಜಗಣವಾಲಿಸಿ ಅಜನಪಿತ ಪಂ। ಕಜಪದಕೆರಗುತ ಭಜಿಸುತ ಭಾವದಿ । ತ್ರಿಜಗದೊಡೆಯ ಗೋವ್ರಜ ದ್ವಿಜಪಾಲನ। ಮಜಭಾಪೆನುತಲಿ ವಿಜಯದಿ ಪೊಗಳೆ ॥ ೧ ॥ ಮುತ್ತೂ ಮಾಣಿಕದ ರಥದಮೇಲೆ। ಮುರಹರನು ಬಾಲೆ। ಜತ್ತಾಗಿ ಕುಳ್ಳಿರೆವಿಶಾಲೆ। ಸತ್ತಿಗೆ ಚಾಮರ ಮೊತ್ತದಲೈತರೆ । ನೃತ್ಯವರಾಂಗನ ತತ್ತಥೈತವೆನೆ । ಇತ್ತರದಲಿ ಗೃಹ ಹತ್ತಿ ಸುದತಿಯರು । ಚಿತ್ತಜನಯ್ಯನ ಚಿತ್ತದಿ ಪೊಗಳೆ ॥ ೨ ॥ ಸುರಪನೋಲಗದಲ್ಲಿ ಬಂದೂ। ಸುರರೆಲ್ಲಾ ನಿಂದು। ಸಿರಿಗಂಧಪುಷ್ಪವ ತಂದು ॥ ಸರಸದಿ ಷೋಡಶ ವರವುಪಚಾರವ । ಸಿರಿಧರಗರ್ಪಿಸಿ ಕರವಮುಗಿಯಲೂ । ಪರಮಪುರುಷ ಭವ ಹರಜನನಿಯ ಮಂ। ದಿರಕೆ ಸತಿಯುಸಹ ತ್ವರಿತೋತ್ಸಾಹದಿ ॥ ೩ ॥ ಶ್ರೀಃ ॥

ಸೀಸಪದ್ಯ.

ಜಗದುದರನಾದಂಥ ಜಾನ್ಹವೀಜನಕನೂ । ಮಗನಾದನೆಂತೆಂಬ ಮಮತೆಯಿಂದ ॥ ಸುಗುಣಮತಿ ಅದಿತಿ ತಾ ಸುರವಂದ್ಯನನು ಕಂಡು । ಬಿಗಿದಪ್ಪಿ ಪ್ಪೈದಡವಿ ಬೇಗದಿಂದ ॥ ಮೊಗವದಿಟ್ಟಿಸಿ ಮುದದಿ ಮುದ್ದಿ

ಸುತ ಪ್ರೇಮಜಲ । ಮಿಗಿಲಾಗಿ ಕಂಗಳಲಿ ಕವಿದವಾಗ ॥ ನಗಧರನ ಮುಂದಲೆಯ ನಾಘ್ರಾಣಿಸುತ ಮನದಿ । ಬಗದಳಾನಂದಮಯವಾದ ಯೋಗಾ ॥ ೧ ॥ ಯೆಲೆಗೆ ನೀಬಾರೆಂದು ಯದುರಾಜ ಪತ್ನಿಯು । ವಲಿಸಿ ಕರಿಯಲು ಬಂದಳೊಲವಿನಿಂದ ॥ ಜಲಜಾಕ್ಷ ಶ್ರೀಹರಿಯ ಜನನಿಪಾವನಿಯೆಂದು । ತಲೆಬಾಗಿ ಪದಕೆರಗಿ ಬೇಗದಿಂದ ॥ ಪೊಳೆವ ಕುಂಡಲವಿತ್ತು ಪುಣ್ಯವತಿಪದಕೆರಗಿ । ಕೆಳದಿ ಕಶ್ಯಪರಾಣಿ ಕಮಲಪಾಣಿ ॥ ಹಲವುಬಗೆಬಗೆಯಿಂದ ಹರಸಿದಳು ಸೊಸೆಯೆಂದು । ಸುಲಭಮತಿಗಳು ಕೇಳಿ ಸೊಗಸುವಾಣಿ ॥ ೨ ॥ ಶ್ರೀಃ ॥

ರಾಗ ಪಾಡಿ, ಕುರಗ ಝಂಪೆತಾಳ.

ಮಾನಿನಿಯೆ ಕಮಲದಾನನೆಯೆ । ನೀಯೆನ್ನ ಮನಕಾನಂದಮಯೆ । ಬಾ ನನ್ನತಾಯೆ ॥ ಪಲ್ಲ ॥ ಕಮಲಜನ ಪಿತನಸತಿ ಕಾರುಣ್ಯಗುಣಯುವತಿ । ಕುಮುದಾಕ್ಷಿ ಕುಶಲೆಸುಮತಿ । ಕಮನೀಯ ವಿಮಲವಿಖ್ಯಾತ ಪ್ರತತಿ । ನೀವಮಾಡಿ ರಮೆಯುರಸನೊಲಿಸಿಕೊಂ । ಡಮಿತ ಸುಂದರಿ ಸುದತಿ ॥ ೧ ॥ ಮಣಿವ್ಯಾಜವಿಂದ ಸಿರಿಧಣಿಯು ಕೈವಿಡಿದು ನಿ । ಸೆಣಸಿ ಸರಿಸವತಿಯೊಡನೇ ಕುಸುಮಕೆ । ಹೆಣಗಿಹರಿಯನುಗೂಡಿವಡನೆ ನೀ ಬರಲು । ಮಣಿದು ಸುಮನಸರೆಲ್ಲ ಪ್ರಣುತರಾಗುವದೊಡನೆ ॥ ೨ ॥ ವೇದಾಂತ ವೇದ್ಯಮುನಿ ಸಾಧನಕೆ ನಿಲುಕದಾ । ಮಾಧವನ ಹೊಂದುಗೂಡೂಮನದಭಲ । ಮೇದಿನಿಯೊಳುಂಟುಮಾಡೂ ಮಿಗಿಲಾಗಿ । ಶ್ರೀಧರಗೆ ಬೇಕಾಗಿ ಸೃಷ್ಟಿಯೊಳಗೋಲಾಡು ॥ ೩ ॥ ಶ್ರೀಃ ॥

ರಾಗ ಪೂರ್ವಿ, ಆದಿತಾಳ.

ಸುದತಿಸತ್ಯಭಾಮೆಯನ್ನು ಅದಿತಿ ತನ್ನ ತೊಡೆಯೊಳಿಟ್ಟು । ಮುದದಿಂದ ಮೋಹಮಾಡುತ ವದನನೋಡುತಾ ॥ ಕದಪಿನಲ್ಲಿ ಕದಪನಿಟ್ಟು ಹೃದಯದೊಳು ಹುದುಗಿಸುತ । ಮಧುರವಚನದಿಂದ ನುಡಿಸಿ ಮಾತನಾಡುತಾ ॥ ೧ ॥ ಸಡಗರದಿ ಶ್ರೀಗಂಧವ ಕುಡುತೆಗಂಗಳಿಗೆ ಹಚ್ಚಿ । ಮುಡಿಗೆ ಮಲ್ಲಿಗೆಯ ಸುತ್ತಿ ಮುದ್ದನಿಕ್ಕುತಾ ॥ ಕಡಲಶಯನ ನಿನ್ನ

ಮನದ ಬೆಡಗ ಬಿಡಿಸಿ ರಕ್ಷಿಸುವ । ತಡವಿಲ್ಲ ಸತ್ರಾಜಿತೆಯೆಂದೊಡನೆ ನುಡಿದಾಳೂ ॥ ೨ ॥ ತರಣಿಕೋಟಿಪ್ರಕಾಶನ್ನ ತರುಣಿ ನಿನಗೆ ಎಂದೆಂದಿಗೆ । ತರುಣಿತನವು ಪೋಗದೆಂದು ವರ್ಣಿಸಿದಾಳೂ ॥ ಕರುಣದಿಂದ ಸೊಸೆಗೆ ದಿವ್ಯಾಭರಣವಸ್ತ್ರಂಗಳ ಕೊಟ್ಟು । ಚರಣದಂದುಗೆಯನಿಟ್ಟು ಹರಕೆನಿತ್ತಳೂ ॥ ೩ ॥ ಶ್ರೀ ॥

ಸೀಸಪದ್ಯ.

ಇಂತು ಇಂದ್ರನ ಜನನಿ ಕಂತುಜನಕನ ಸತಿಗೆ । ಸಂತೋಷವಮಾಡೆ ಶಚಿದೇವಿ ನೋಡಿ ॥ ಸಂತೈಸಲಾರದೆ ಆಸತ್ಯಭಾಮೆಗೆ । ಕಿಂತುಮನದಿಂದಲಿ ಹೋಗಲಾಡಿ ॥ ಇಂತಿಪ್ಪ ಸ್ವರ್ಗಕ್ಕೆ ಈಡಾಗುವದೆ ಕಲಿಯು । ಪಂಥದಾ ಮಾತಲ್ಲಪಾರಭೋಗ ॥ ಸಂತತವು ಉಂಟೆಂದು ಸಾಕ್ಷಿಗಳ ಪೇಳಿದಳು । ಅಂತುತಿಳಿಯದ ನಾರಿಯಾಡ್ಡಳಾಗಾ ॥ ೧ ॥

ರಾಗ ಪೂರ್ವಿ, ಆದಿತಾಳ.

ಕಂಗಾಳಿಲ್ಲಾ ಐರಾವತಕೆ ಜೋಡೆ । ಕಾಮಧೇನಿಗೆ । ಧರೆಯಾ ಮೇಲಿದ್ದಾಕಳುಗಳೀಡೆ ॥ ಸುರತರುವಿಗೆ ಸಮವೆ ಸಕಲಮರವೂ । ಸುರವನಿತೆರಿಗೆ ಸರಿಯೆ ನರರ ಸ್ತ್ರೀಯರೆಲ್ಯಾದರವೂ ॥ ೧ ॥ ಕನಕಕೊಂಬ್ಬಿತ್ತಾಳಿ ಬಣ್ಣಾವಂದೆ ರಾಜಿನಾಮಣಿ । ಘನವಾದಾ ರತ್ನದಾ ಬೆಲೆಗೆ ತಂದೆ। ಇನನಕಾಂತಿಗೆದಿರೆ ಮನೆಯದೀಪಾ । ಈನಾರಿವೆಗ್ಗಾಳೆನಲು ನಮಗೆ ಬಾರದೇನೆ ಕೋಪಾ ॥ ೨ ॥ ತುರಗಗಳು ವುಚ್ಚೈಶ್ರವಕೆ ಸಾಟಿ । ತೋರುವೆ ಪುಷ್ಪಾ ಸಿರಿಪಾರಿಜಾತಕ್ಕೆ ಪಂಪಾಟಿ ॥ ಉರಗನಿಕರಾ ವಾಸುಕೀಗೆ ಜೋಡೆ ಈಸತ್ಯಭಾಮೆ । ತರಳೆ ನಮಗೆ ಸರಿಯಾಗೊಳೆ ನೋಡೆ ॥ ೩ ॥ ಶ್ರೀ ॥

ಸೀಸಪದ್ಯ.

ನೆಲೆಯತಿಳಿಯದವಮಾತು ನೀನಾಡಬೇಡವೆ । ಛಲದಂಕೆ ಶಚಿದೇವಿ ಚೇಷ್ಟೆಕೇಡೂ ॥ ಕಲಿಯುಗದಿ ಶತಕ್ರತುವ ಕಾವ್ಯವನೆ ಸಾಧಿಸಿ । ಬಿಳಿಗೆಬಂದನು ನಿನ್ನ ಭರ್ತನೋಡು ॥ ಫಲವುಸಂಪದವಿಪ್ಪ ಚಿರಸೌಖ್ಯ

ವೆನಬೇಡ । ಫಲವು ತೀರಿದಬಳಿಕ ಪುಣ್ಯವೆಲ್ಲ ॥ ಚಲಿಸಿ ನರಲೋಕಕ್ಕೆ ಚಾಲವರಿವುತ ಬಿದ್ದು । ಬಳಲುವರು ಬಲುಬಂಧದೊಳಗೆಯೆಲ್ಲಾ ॥ ೧ ॥ ಅಮಿತತಪಗಳಮಾಡಿ ಅಸುರರೆಲ್ಲರು ಕೂಡಿ । ಅಮರಲೋಕದಲಿದ್ದ ಅಂದವನ್ನು ॥ ತಮದೆಂದು ತಾಮುಸದಿ ತರಿದೊಟ್ಟಿ ಸತ್ಕರ್ಮ । ಕ್ರಮಗೆಡಿಸಿ ಕಾಂತಾರವಾಸರನ್ನು ॥ ಸುಮತಿ ಧರೆಗೋವೆನಿಸಿ ಸುರವಂದ್ಯನಿಗೆ ನಮಿಸೆ । ಕಮಲನಾಭನು ಜನಿಸಿ ಖಳರನೆಲ್ಲ ॥ ನಿಮಿಷದೊಳು ಸಂಹರಿಸಿ ನಿರ್ಜರರ ಸಲಹಿದನ । ಪ್ರಮದೆಗೀನಿಂದ್ಯನುಡಿಯಾಡಸಲ್ಲಾ ॥ ೨ ॥ ಸದ್ದುಶಚಿದೇವಿ ನೀ ಸರಿಗಟ್ಟುತಾಡಿದ್ದು । ಸಿದ್ಧವಲ್ಲೆಂದು ಸಿಟ್ಟದಿತಿಮಾಡಿ ॥ ಮುದ್ದುಸೊಸೆ ಬಾರೆಂದು ಮುನಿಸುತಿಳಿವುತ ವೀಳ್ಯ । ಶುದ್ಧಮನದಿಂದೀಯೆ ಸುರರುಗೂಡಿ ॥ ಬಿದ್ದುದಂಡಗಳೀಗ ಬಿಸಜಾಕ್ಷಗೊಂದಿಸಿ । ಶ್ರದ್ಧೆಯಿಂದಲಿ ಕಳುಹೆ ಸರ್ವರೆಲ್ಲ ॥ ಇದ್ದಸ್ಥಾನಕೆ ಪೋಗೆ ಇತ್ತಾದ ವೃತ್ತಾಂತ । ಶುದ್ಧಮತಿಗಳು ಕೇಳಿ ಸೊಗಸುಸೊಲ್ಲ ॥ ೩ ॥ ಶ್ರೀಃ ॥

ರಾಗ ಭೈರವಿ, ತ್ರಿಪುಟತಾಳ.

ಹರಿಣನಯನೆಯಗೂಡಿ ಮುರರಿಪು । ಗರುಡವಾಹನನಾಗುತಾ ॥ ತೆರಳಿಬರುತಿರೆ ತೋರಿತಮರರ । ಸಿರಿಯನಂದನಬನವುತಾ ॥ ಭರಿತಪುಷ್ಪಾಮೋದಗುಣ ಬಂ । ಧುರಿತಪವನಾನಂದರೇ ॥ ಮೊರವುತಿಹ ಭ್ರಮರಾರಿಝೇಂಕರ ವರಮನೋಹರ ಚಲುವಿಕೆ ॥ ೧ ॥ ದೇವವನವನು ಸತ್ಯಭಾಮಾ । ದೇವಿ ಕಾಣುತ ಮುದದಲಿ ॥ ಭಾವಜನ ಪೆತ್ತವನ ಕರವಿಡಿ । ದಾವದನವೀಕ್ಷಿಸುತಲೀ ॥ ಈವನದ ಪೆಸರೇನು ಕರುಣಿಸು । ದೇವ ಬಿನ್ನಹಮಾಡುವೆ ॥ ಭಾವಕಾನಂದಾಯಿತು ಭಕ್ತರ । ಜೀವ ನಿನ್ನ ಕೊಂಡಾಡುವೆ ॥ ೨ ॥ ಎರಡುಘಳಿಗೆ ವಿಳಂಬವಾಗಲಿ । ಸುರರವನದಾ ಕ್ರೀಡೆಯೋಳ್ ॥ ಸರಸವಾಡುವೆನೆನಲು ಶ್ರೀಹರಿ ಗರುಡನಾನನ ನೋಡಲೂ ॥ ಶರವ ಪದತಳಕ್ಕೊಚ್ಚಿ ಇಳುಹಲು । ಧರೆಗೆ ದಂಪತಿಯುಕ್ತರು ॥ ತ್ವರಿತ ವನಪಾಲಕರ ಮನ್ನಿಸಿ । ಭರದಿ ವನದೊಳು ಪೊಕ್ಕರೂ ॥ ೩ ॥ ಶ್ರೀಃ ॥

ರಾಗ ಭೈರವಿ. ಆದಿತಾಳ.

ವನವನೀನೋಡಿದ್ಯಾ ನಂದನಬನವು । ನೀನೋಡಿದ್ಯಾ । ಅನಿಮಿಷರಿಗೆ ಸುಖ ಘನವಾಗೋದು ಇದರಿಂದಾ । ಪರಮಾನಂದ ॥ ಪಲ್ಲ ॥ ತರುಲತೆ ಗುಲ್ಮವು ತಾರುಥಟ್ಟಿನಾಲಿಸವಾತಳದಿ ತುಂಬಿಸುವಾ । ವರಶುಕಪಿಕರವ ಪಾಲಿಸಿ ಷಟ್ಪದಗೀತಾ । ಕೇಳುವ ಪ್ರೀತಾ ॥ ಪರಿಪರಿ ವೃಕ್ಷವು ಪಸರಿಪ ಶಾಖೆಯುಪರ್ಣ । ಕನಕದವರ್ಣಾ ॥ ಅರಳುವಪುಷ್ಪಫಲಾದಿಗಳೊಪ್ಪುವ ಪ್ರೇಮಾ । ತೋರ್ಪದು ಭಾವಾ ॥ ವನವ ನೀನೋಡಿದ್ಯಾ ॥ ೧ ॥ ಅಂಬರಕಡರಿದ ಸಂಭ್ರಮ ತೆಂಗಿನಮರವು । ಪನಸಗಳಿರವೂ ॥ ತುಂಬಿದರಸಫಲ ಕೊಂಬೆಯುಮಾವಿನಗಿಡವೂ । ಜಂಬುಕಪಿತ್ಥ ದಾಳಿಂಬನಿಂಬೆಬನಕುರಳೆ । ನೋಡೆಲೆ ತರಳೆ ॥ ಅಂಬುಜಮುಖಿ ಮನದಿಂಬಿಗೆ ಸತ್ಸುಖವಾದಾ । ಪರಮಾಹ್ಲಾದ ॥ ೨ ॥ ಚಂದದಿ ಮಂಟಪಹೊಂದಿಪ ದ್ರಾಕ್ಷಿಯ ಲತವೂ । ಫಲವುನ್ನತವೂ ॥ ಸುಂದರಜಾಜಿ ಸುಗಂಧಿದಾಸಾಳ ಕ್ಯಾದಿಗೆಯೂ । ಮಿಗೆಸಂಪಿಗೆಯೂ ॥ ಅಂದವಿಶಾಲ ನೀನಿಂದು ಚಂದಿರಮುಖಿ ನೋಡೆ । ಸೌಖ್ಯ ಮಾತಾಡೆ ॥ ಇಂದುವದನೆ ಸಾಕಿಂದು ಪೋಗುವ ನಡೆಬೇಗಾ । ದ್ವಾರಕಿಗೀಗ ॥ ವನವ ನೀನೋಡಿದ್ಯಾ ॥ ೩ ॥ ಶ್ರೀಃ ॥

ಸೀಸಪದ್ಯ.

ಸಕಲವೃಕ್ಷವ ತೋರಿ ಸಂತೈಸಿದಲ್ಲದೇ । ಪ್ರಕಟಕಾಂತಿಗಳಿಂದಪಾರವಾದ ॥ ವಿಕಸಿತಾಲಂಕೃತದಿ ವಿಪರೀತಪುಷ್ಪಗಳು । ಶುಕಪಿಕಭ್ರಮರಕ್ಕೆ ಸೊಗಸುಸ್ವಾದ ॥ ಮಕರಕುಂಡಲಧಾರ ಮಾಜಿಪೇಳದಲಾದೆ । ಮಕುಟವರ್ಧನನಾನು ಮಂಕುನಾರಿ ॥ ಅಕಲಂಕದಾ ವೃಕ್ಷದಾಶ್ರಯಕೆ ನಡೆಯೆಂದು । ಮುಕುತಿದಾಯಕಗೆ ಕೈಮುಗಿದು ನೀರೆ ॥ ೧ ॥ ಶ್ರೀಃ ॥

ರಾಗ ಭೈರವಿ, ಆದಿತಾಳ.

ನೋಡೀಜಗವಾಗದೆ ಸೊಗಸಿನ ವೃಕ್ಷವು । ರಾಜಿಪ ವನದೊಳಗೆ ॥ ಈ ಜಗದೊಳು ಸುರರೇನುಧನ್ಯರೋ । ಮಾಜದೆ ಪೇಳೆನಗೆ । ನಿನಗೆ ॥ ಪಲ್ಲ ॥

ಮರಕತಜಗಲಿಯು ಮಧ್ಯದಿ ಕನಕದ । ಮರವಿದೆ ಗೋವಿಂದಾ ॥ ವರ ವೈಡೂರ್ಯದ । ವಪ್ಪುವಶಾಖೆಯು । ಸ್ಮರನಕರಗಳಂದಾ ॥ ಹರಿನೀಲಾ ಮಣಿ ಹಸಂಪಿದೆಲೆಗಳು । ಇರುವಿಕೆ ಬಲುಚಂದಾ ॥ ಮುರಹರ ತರುವಿನ ಮೂಲಪ್ರವಾಳವು । ಅರುಣಪ್ರಭೆಗಳಿಂದಾ । ಚಂದಾ ॥ ೧ ॥ ಮಾಣಿಕ ಪುಷ್ಪವು ಮಹಾಪ್ರಕಾಶವು । ಪ್ರಾಣನಾಯಕ ನೋಡೂ ॥ ವಾಣಿಗಸಾಧ್ಯವು ವಜ್ರದಕುಸುಮವು । ಕ್ಷೋಣಿಯೊಳಿದಕೀಡೂ ॥ ಕಾಣೆನುಕಾತಿಹ ಕಾಯೊಳು ನವರತ್ನಮಣಿಮುತ್ತಿನಸೂಡೂ ॥ ಮಾಣದೆ ನಮ್ಮಯ ಮನೆಗೆ ಕೊಂಡ್ಯೊವಂಥ । ಜಾಣತನವಮಾಡೂ । ನೋಡು ॥ ೨ ॥ ಎನ್ನಂಗಳದೊಳು ಯಸೆಯಲು ಮಾನವ । ಉನ್ನತವಾಗುವದೂ ॥ ಚನ್ನೆರುಕ್ಮಿಣಿಯೊಳು ಛಲಮಾಡಿದ್ದುದದನ್ನು । ಉದ್ಧರಿಸುವದು ॥ ಪನ್ನಗಶಾಯಿ ನಾನನ್ಯೋನ್ಯಳು ಈ । ಮನ್ನಣೆಮಾಡುವದೂ ॥ ಚನ್ನಿಗ ನಿನ್ನಯ ಚರಣ ಕೊಂದಿಸುವೆ ಸೇ । ಳಿನ್ನು ಇದರಪೆಸರಾ । ಹೆಸರಾ ॥ ೩ ॥ ಶ್ರೀಃ ॥

ರಾಗ ಶಂಕರಾಭರಣ, ಆದಿತಾಳ.

ನಾರದಮುನಿಯು ತಂದ ಪಾರಿಜಾತದಕುಸುಮ । ಸೇರಾಲು ರುಕ್ಮಿಣಿ ಕೈಯಾ ಶಾರಾದೆ ನೀನು ॥ ವಿಾರಿದ್ದ ವ್ಯಾಕುಲದಿಂದಾ ವಿಾನು ಜಲವ ನಗಲಿದಂತೆ । ವೋರೆಕುಂದಿ ಮುನಿದಂಥ ವೋದವೃಕ್ಷಾವೆ ॥ ೧ ॥ ವಾಲೆಬರದು ವನಿತೆ ಕಳುಹಿ ಲೀಲೆಯಿಂದಾ ನೀನೆ ಬಂದು । ಶ್ರೀಲತಾಂಗಿ ರುಕ್ಮಿಣಿಗೆ ಸೋಲಲಾಡುತಾ ॥ ಜಾಲನಿಂವ್ಯಾಮಾಡಿ ನಿನ್ನಾಲಯಕ್ಕೆಪೋಗಿ ಶಿವನ । ಬಾಲೆ ಭಜನೆಗೈಸಿದಂಥಾ ಲೋಲವೃಕ್ಷಾವೆ ॥ ॥ ೨ ॥ ಪರರವಸ್ತುಗಾಸೆಮಾಡಿ ಪಾಪಕ್ಕೆ ಗುರಿಯಾಗಬೇಡಾ । ವಿರಸಾದಿವಿಜರೊಳಗೆ ಮಾಡೋ ಸರಸಸಲ್ಲಾವೆ ॥ ಸುರರಪದವಾ ಬಯಸಿ ನರಕಾಸುರನು ಮುರನು ಕೆಟ್ಟಾರರಿಯಾ । ಥರವಲ್ಲಾ ಈಮರವಾನೊಯಿವಾ ಗರುವಾ ಧರೆಯೊಳೂ ॥ ೩ ॥ ನೋಡು ದೃಷ್ಟಿಯಿಂದಾಲಿ ಕೊಂಡಾಡು ಮನದಿ ಛಾಯಾದಡಿಯಾ । ಕೂಡು ಎನ್ನೊಳಾಗೆ ಮಾತನಾಡೂ ಹರುಷಾದಿ ॥ ಕೂಡಿಕೊಂಡು ವೃಕ್ಷಾನೊಯಿವಾದಾಡಬೇಡಾ

ವಂಬುಜಾಕ್ಷಿ । ಬೇಡಿಕೊಂಬೆ ಯೆನ್ನಾ ನೀನು ಕಾಡಾಬೇಡಾವೆ ॥ ೪ ॥ ಶುದ್ಧಪಾರಿಜಾತನೊಯ್ಯಾಲಿದ್ದಾ ವನದಾಕಾಹಿನವರು । ಬುದ್ಧಿಹೇಳಿ ನಾವು ಕೇಳಾದಿದ್ದಾರವರೂ ॥ ಸುದ್ದಿಸುರರಾ ಧೊರೆಗೆ ಹೇಳಿ ಮುದ್ದಗ ಜವನೇರಿಬರಲು । ಹೊದ್ದುವಾದು ಕದನಾಕಾರ್ಯ ಬದ್ಧಿಸಿ ನೋಡೆ ॥ ೫ ॥

ಸೀಸಪದ್ಯ.

ಆರೊಡನೆ ಭೀತಿಯನು ತೋರಿಸುವೆ ನಿನ್ನ ಮಹಿ । ಮಾರುಬಲ್ಲರು ಸುವಿಸ್ತಾರಮೂರ್ತಿ ॥ ಪೂರೈಸು ಬಿನ್ನಹವ ಭೂರಿನಯವುಳ್ಳವನ । ನಾರಿ ನಿಂದಿಸಲಿಲ್ಲೆ ಗಾಡಿಗಾರ್ತಿ ॥ ಶೌರಿ ನೀನಂತೆನ್ನ ಗಾರುಮಾಡಲು ಧಿಟವಿ । ಚಾರಿಸುವರಾರೆಂದು ಧೀರನಾರಿ ॥ ಮೋರೆತಗ್ಗಿಸಿ ನಯನ ವಾರಿಧಾರೆಯು ಸುರಿಯೆ । ಮಾರಮಣ ಮಾನಿನಿಗೆ ತೋರಿಪ್ರೀತಿ ॥ ೧ ॥

ಶ್ಲೋಕ: — ನಾರೀ ನೀ ಹಟಮಾರಿ ಧೀರೆಚತುರೀ । ನಾನಾಪರೀ ಚಾತುರೀ ॥ ತೋರೀ ಬಿಂಕವ ಬೀರಿಮಾಡಿದ ಛಲಾ । ಸೂರ್ಯಾಡಿದೆ ಸುಂದರೀ ॥ ಪಾರೀಜಾತವನೊಯಿದು ನಿನ್ನ ಗೃಹದಾ । ದ್ವಾರದಲಿ ನಾನಿಡುವೆನೆ ॥ ಮೋರೇತಗ್ಗಿಪ ಮುನಿಸುಮಾಣ್ಗು ಸಖಿಯೆ । ಮೋಹನ್ನೆ ದಯಗೈವೆನೆ ॥ ೧ ॥

ರಾಗ ಶಂಕರಾಭರಣ, ಅಟತಾಳ.

ಲೀಲೆಯ ತೋರಿದಾನು ಗೋ। ಪಾಲ ತನ್ನಾ ಬಾಲಕಿಯಾ ॥ ಪಾಲಿಸೀ ಸಂತೋಷಾದಿಂದಾ । ಲಾಲಿಸುತ್ತಭಯವನಿತ್ತಾ ॥ ಲೀಲೆಯಾ ॥ ಪಲ್ಲ ॥ ಮುತ್ತುಮಾಣಿಕದಾ ವೃಕ್ಷ। ಕಿತ್ತು ಕೇಶವ ತೋಳ್ಗಳ। ನೆತ್ತಾಲೂ ಖಗರಾಜಾ ತಾನೂ । ಪೊತ್ತಾ ತನ್ನ ಪೆಗಲಲಿ ॥ ಚಿತ್ತಜನಯ್ಯಾನು ಕೃಪೆ । ಯಿತ್ತು ಸತ್ರಾಜಿತೆಯಗೂಡಿ॥ ಜತ್ತಾಗಿನಿಲ್ಲೆ ಕಾಹೀನ ಭೃತ್ಯರೂ ಬಂದು ಈವೃಕ್ಷ ॥ ಎತ್ತಿಕೊಂಡು ವಯ್ಯುವಾಗ । ಉತ್ತುಮಾನಲ್ಲೆಂದುಪೇಳಾ ॥ ಲತ್ತತ್ತಾಸಾರೆಂದು ಖಗನಾ । ಹತ್ತಿ ಮುಂದಕೆ ನಡೆಯಾಲು ॥ ಇತ್ತಲಿಂದ್ರಾನಿಗೆ ಕೋಪ। ಹತ್ತಿ ತನ್ನಾ ಬಲವಾಗೂಡಿ॥ ಮುತ್ತಾಲೂ ಮುರವೈರಿ ತನ್ನಾ।ಚಿತ್ತದೊಳ್ಗಭಿಯ ನೋಡಿ॥ ಕೃತ್ಯಕಾ ಸಿನ್ನಾದುಯೆಂದು।ಇತ್ತಮೊ

ಬಿಲ್ಲುಬಾಣವಾ ॥ ಸತ್ಯಭಾಮೇಯೆಸದು ಸುರರಾ । ತತ್ತಳವಾಸೆಮಾಡಿದ ॥ ಲೀಲೆಯಾ ॥ ೧ ॥ ಹೆಂಗುಸೂ ಬಾಣವಾ ಪಿಡಿದೂ । ನುಂಗುವಾಳು ಬಲ ವಾನೆಲ್ಲಾ ॥ ತಂಗವಾದಾ ಶೌರ್ಯಾಮಾನ । ಭಂಗ ಸಮ್ಮದಾಯಿತಲ್ಲಾ ॥ ಹಿಂಗಾದೆ ರಣದಲ್ಲಿ ನಿಂತು । ಮಂಗಗಳಂತಾದೆವಲ್ಲಾ ॥ ಶೃಂಗಾರದಾ ತರು ವಾನೊಯ್ಯೆ । ಮಂಗಳಾ ಕುಂದಾಯಿತಲ್ಲಾ ॥ ಸಿಂಗನ ಸುತ್ತಮುತ್ತ ಗ।ಜಂ ಗಳಂತೆ ನಿಂತೆವಲ್ಲಾ ॥ ಕಂಗು ನಮ್ಮದೆಂದು ತಮ್ಮಾ । ಕಂಗಳ ಕಿಡಿಗಳು ದುರುತ ॥ ಲಂಘಿಸೀ ಉನ್ನತದ ಬಾ । ಣಂಗಳಮರಾರು ಸೂಸೆ ॥ ಅಂಗಾನೆ ಬಂದ ಕಣೆಗಳ । ಭಂಗಿಸೀ ಬಾಹುಸತ್ವಾದಿ ॥ ಮುಂಗೊಂಡೂಬಂದ ದೇವ ತೆಯ । ರಂಗಲಾಪ ಕಂಡು ನಾರಿ ॥ ಭಂಗಿಸಾಲು ಸಜ್ಜನರ । ಸಂಗ ನೋಡೀ ಹಿಗ್ಗುವಂಥ ॥ ಲೀಲೆಯಾ ॥ ೨ ॥ ಇಂದ್ರ ತನ್ನಾನೆಯನೇರಿ । ಬಂದಾನು ಟಗರವೇಲಗ್ನಿ ॥ ನಿಂದಿತೂ ಕೋಣಾನು ಯಮನಾ । ನಂದವಾ ನೋ ಡೆಂದು ನರನ ॥ ಸ್ಕಂಧದಲ್ಲೀ ನೈಋತ್ಯಾಟಗ । ಳಂದವಾ ನೋಳ್ಪರ್ಭಕ ನಂತೆ ॥ ಸುಂದರಾವರುಣಾನು ನೆಗಳ । ಹೊಂದಿ ಧ್ಯಾನಾಮಾಡುವಂತೆ ॥ ಕುಂದದೆನ್ನಾ ಭಾಗ್ಯಾನೋಡೀ। ರೆಂದು ತುರಗಾರೋಹಣನಾಗಿ ॥ ಮುಂದೆ ಧನಪಾ ಈಶಾನ್ಯರು । ನಂದಿಯಾನೇರಿ ನಿಬ್ಬಣಕೆ ॥ ಬಂದ ಬೀಗಾರಂತೆ ಇರಲು । ಮಂದಹಾಸಾದಿಂದಾ ದೇವಾ ॥ ಚಂದನಾಗಂಧೀಗೇಪೇಳೆ । ಬಂಧಿಸಿ ಬಾಣಗಳಿಂದ ॥ ಸಂದುಬಿದ್ದೋಡಿತು ದಿವಿಜ । ವೃಂದಾ ವೇಗಾ ದಿಂದಾಲಾಗಾ ॥ ಲೀಲೆಯಾ ॥ ೩ ॥ ಶ್ರೀ ॥

## ಸೀಸಪದ್ಯ.

ಸುರರು ಪರಿಪರಿಶರವ ಸುರಿದು ಹರಿಯುರಸಿಯೊಳು । ಧುರವ ಜಯಿಸ ದಲೆ ದುಮ್ಮಾನದಿಂದಾ ॥ ಮರೆಹೊಕ್ಕು ವಂದಿಸೆನೆ ಮಾಧವನೆ ನೀನಿತ್ತ । ಸಿರಿಯಲ್ಲವೇನಯ್ಯ ಶ್ರೀಮುಕುಂದಾ ॥ ಕರುಣಾಳು ನಾ ನೀಚ ಕಾಕುಬು ದ್ಧಿಯ ನೆನದೆ । ಪರಮಪಾವನಮೂರ್ತಿ ಪಾಲಿಸೆನ್ನಾ ॥ ತರಳನಪರಾಧ ಪನು ತಾಯಿ ಮನ್ನಿಸುವಂತೆ । ಪೊರೆಯೊ ಪಂಕಜನೇತ್ರ ಪೊಗಳ್ವೆ ನಿನ್ನಾ ॥ ೧ ॥ ಶ್ರೀ ॥

ರಾಗ ಸೌರಾಷ್ಟ್ರ, ಆದಿತಾಳ.

ತರಳ ನಮಗೆ ನೀನು ತತ್ತರಗೊಳಬೇಡಾ । ತರಳು ನಿನ್ನರಮನೆಗೀಗಾ ॥ ತರಳೆ ಛಲವಮಾಡೀ ತರುವ ಕೇಳಿಸಿದಾಳೂ । ದುರುಳೆಮಾಡಿದಳು ಪ್ರಯೋಗ ॥ ೧ ॥ ಎನ್ನಾಮಾಯಕೆ ಸಿಲ್ಕಿ ಭಿನ್ನಬುದ್ಧಿಯುಮಾಡೀ । ಖಿನ್ನತನಕೆ ಒಳಗಾದೆ ॥ ಮನ್ನಿಸುವೆನು ನಿನ್ನ ಅನ್ಯನೀನಲ್ಲೆಂದು । ಚೆನ್ನಾಗಿ ಮಾಡೀದ ಬೋಧೆ ॥ ೨ ॥ ಇಂದ್ರ ಕೇಳೀವೃಕ್ಷ ಚಂದ್ರಮುಖಿಯು ಮನೆ । ಮುಂದೆ ನಿಲ್ಲಿಸಿ ತೋರ್ಪೆ ತೋಷಾ ॥ ಸಂದಾಲು ದ್ವಾಪಾರಾ ಹೊಂದೋದು ನಿನ್ನಾನು । ಸಂದೇಹಬೇಡ ಸುರೇಶಾ ॥ ೩ ॥

ರಾಗ ನೀಲಾಂಬರಿ, ಅಟತಾಳ.

ವಾರಿಜಾನಾಭಾನು ದಿವ್ಯಾ ಪಾರಿಜಾತವನ್ನು ತಂದು । ನಾರಿಸತ್ಯಾಭಾಮೇಮನೆಯಾ ದ್ವಾರದಲಿ ನಿಲ್ಲಿಸೆ ॥ ಕೇರಿಕೇರಿಯಲ್ಲಿ ಬಂದಾ ವಾರತೆಯಾ ಕೇಳಿ ಪುರದಾ । ನೀರೆಯಾರೆಲ್ಲಾರು ಬಂದು ನೆರದರಾಕ್ಷಣದೀ ॥ ॥ ೧ ॥ ದೇವಕೀ ಯಶೋದೆ ವಸುದೇವ ನಂದಾ ಬಲರಾಮಾ । ಕಾವಸಾಂಬಾಸಾತ್ಯಕಿ ಉದ್ಧವ ಕೋವಿದಾರೆಲ್ಲಾ ॥ ಭಾವಜನಯ್ಯನೂ ತಾನೂ ದೇವಲೋಕದಲ್ಲಿ ಪೋಗೀ । ದೇವತೇಯರನು ಗೆದ್ದ ದೇವಾದಿದೇವಾ ॥ ೨ ॥ ಏನು ಪುಣ್ಯಾಮಾಡಿದಾಳೊ ಏನು ಕೋಪೀಸೂತಿದ್ದಾಳೊ । ಈನಾರಿಸತ್ಯಭಾಮೆಗೆ ಈಡಿಲ್ಲಾವೆಂದೂ ॥ ಮಾನಿನೀಯಾರೆಲ್ಲಾತಮ್ಮಾ ಮಂದಿರದೊಳಾಗೆ ನುತಿಸೀ । ಆನಂದಾವಾಗುತಾಲಿಪ್ಪರಾಹ್ಲಾದದಿಂದ ॥ ೩ ॥ ಶ್ರೀಃ ॥

ಸೀಸಪದ್ಯ.

ಪಾರಿಜಾತದಾ ವೃಕ್ಷ ಪನ್ನಗಾಶಾಯಿ ತಾ । ನಾರಿ ಭವನದಲಿ ತಾನಡಿಸಲಾಗ । ಭೇರಿನಿಸ್ಸಾಳಗಳು ಬಿಂಕದಲಿ ಬಾರಿಸುತ । ದ್ವಾರಕಾನಗರಕಾನಂದಭೋಗ ॥ ತೋರಿಸಲು ಸಂಭ್ರಮವು ತುಳಿಕ್ಯಾಡಲಾಗರ್ವ । ಮೇರುಹತ್ತಿದಳು ಮೀನಾಕ್ಷಿ ತಾನೂ ॥ ಈರಾಜ್ಯದೊಳಗೆನಗೆ ಈಡಿಲ್ಲೆನಲು । ತೋರಿದನು ಶ್ರೀಕೃಷ್ಣ ಲೀಲೆಯನ್ನೂ ॥ ೧ ॥ ಶ್ರೀಃ ॥

## ರಾಗ ಭೈರವಿ, ಆದಿತಾಳ.

ಪಾರಿಜಾತಾವೃಕ್ಷಾ ಸತ್ಯಾಭಾಮೆ ಮನೆಯಾಮುಂದೆ ನಿಲಿಸೀ । ತೂರುವಾ ಘಾಳೀಗಳಿಂದಾ ತೂಗುವಾ ಪುಷ್ಪಾ ॥ ನಾರಿರುಕ್ಮಿಣಿಯಾ ಮನೆಯೊಳ್ಹಾರಿಬೀಳೆ ಸತ್ರಾಜಿತೆಗೆ । ವಿಾರಿದ್ದಾ ದುಗುಡವ ಹೆಚ್ಚಿ ಮಿಡುಕಿ ನಿಂದಿರಲೂ ॥ ೧ ॥ ವಾರಿಜಾಕ್ಷಾ ಬಂದುವರ ವದನವನ್ನು ನೋಡಿ ನುಡಿದಾ । ಕಾರಣೀಕವಾದಾ ಮಾತಾ ಕರುಣಸಾಗರನು ॥ ನೀರೇ ಮನೋಹಾರಿ ಧೀರೇ ಬಾರೆ ಮುದ್ದುಸೂರೆಗೊಂಬ । ವಾರೆನೋಟಾದಾ ವಯ್ಯಾರಿ ವದನವ ತೋರೆ ॥ ೨ ॥ ಹೇಳೀದಂತೆ ಕೇಳಿ ನಿನ್ನಾ ಕೇಳೀಗೊದಗಿ ನರಕಾಸುರನಾ । ಬೀಳಾಗಡಿದೂ ಬಿಂಕಾದಿಂದಾ ಮೇಲಿದ್ದಾ ಲೋಕಾ ॥ ಪಾಲರನ್ನು ಗೆದ್ದು ದಿವ್ಯಾ ಪಾರಿಜಾತವನ್ನು ತಂದೂ । ನಾರಿ ನಿನ್ನಾ ಗೃಹದೊಳಿಟ್ಟೆ ಬನ್ನಾಣಿಯಾಕೆ ॥ ೩ ॥ ಘಾಳಿಯಿಂದಾ ಪಾರೀಜಾತ ಹಾರೀ ಪುಷ್ಪಾ ರುಕ್ಮಿಣಿಯಾ ॥ ಆಲಯದೊಳಗೆ ಬೀಳೆ ಅರಿಯಾದೆ ನೀನು ॥ ಚಾಲಾವರಿದಾರಿನ್ನು ಮನದಾ ಛಲವುದಕ್ಯಾವಾದೆ ರಮಣೀ । ಮೇಲಾದ ಬುದ್ಧಿಯಾ ಕೇಳೂ ಮಿಗಿಲಾಗಿ ನೀನೂ ॥ ೪ ॥ ನಾನೆಂಬಹಂಕಾರ ಬಿಟ್ಟು ನಾರಿರುಕ್ಮಿಣಿಯಾ ಮನೆಗೇ । ನೀನಡೆ ನೀರಜಗಂಧಿ ಆನಾರಿ ನಿನ್ನಾ ॥ ಆನಂದವಾಮಾಡೀ ಅರ್ಥಾ ಅಲರಾನಿತ್ತು ಕಳುಹುವಾಳೂ । ಮಾನವಂಥಾಳಾದಿ ಬಾಳೆ ಮಾನಿನೀ ರನ್ನೆ ॥ ೫ ॥ ಶ್ರೀಃ ॥

## ಸೀಸಪದ್ಯ.

ಪತಿಯು ವಚನವ ಕೇಳಿ ಖತಿಗೊಂಡು ಕಂಜಾಕ್ಷಿ । ಧೃತಿಗುಂದಿ ವಲ್ಲಭನ ಮೊಗವನೋಡಿ ॥ ಚತುರ ನಿನ್ನಯ ಮನದ ಚರ್ಚೆಘನವಾಯಿತೊ । ಸತತ ಎನ್ನೊಳಗೆ ನೀ ಸರಸವಾಡಿ ॥ ಮತಿವಂತ ರುಕ್ಮಿಣಿಗೆ ಮನವಸೋತೂ ಅವಳ । ಕ್ಷಿತಿಗೆ ವೆಗ್ಗಳನೂಡ್ಡೆ ಸಿದ್ಧಸೊಲ್ಲ ॥ ಪತಿಯೊಡನೆ ಬಗೆಬಗೆಯ ಪಂಥವನುಮಾಡಿದರೆ । ಪತಿತಳೆಂಬೊರು ಪತಿವ್ರತೆಯರೆಲ್ಲಾ ॥ ೧ ॥ ಶ್ರೀಃ ॥

ರಾಗ ಮುಖಾರಿ, ಆದಿತಾಳ.

ನಂಬಿದೇನೋ ನಾಗಶಯನಾ ನಗೆಯಮಾಡಿದೆ ನಿನ್ನಾ । ಹಂಬಲ ಮಾಡೆನ್ನಾ ವ್ರತವು ಹಗರಣವಾಯಿತೂ ॥ ೧ ॥ ನಿನ್ನಾ ಮಾತಾ ಕೇಳಾ ವಿರಲೂ ನೀತಿಗೆಟ್ಟಾಳೂ ಎಂಬಾ । ಖಿನ್ನಾತನವೂ ಎನ್ನಾಮೇಲೆ ಕಿಂಚಿ ತೆಂಬೆನೆ ॥ ೨ ॥ ಯೇಳೋ ಕೃಷ್ಣಾ ಯೇಣಾನಯನೆ ಆಲಯಾಕೇಗಾ ಅವಳಾ । ಜಾಲತನವಾ ನೋಡೂವೆನೂ ಜಾನ್ಹವೀಜನಕಾ ॥ ೩ ॥ ಪೋದಾರೆನಗೇ ಪೋರೀಯಿಂದೂ ಆದಾರವಿಲ್ಲದೆ ಸುಮ್ಮಾ । ನಾದಾ ರೆನ್ನಾ ನಾಚಿಕೆಯು ಪೋಗಾದೆ ಕೃಷ್ಣಾ ॥ ೪ ॥ ಎನ್ನಾ ಮಾನಾಪ ಮಾನಗಳೂ । ನಿನ್ನಾದಲ್ಲವೇ ಎಂದು । ರನ್ನೆ ಪಾದಕ್ಕೆರಗಲಾಗಾ ಮನ್ನಿಸಿದಾನೂ ॥ ೫ ॥ ಶ್ರೀಃ ॥

ಶ್ಲೋಕ:—ಎಷ್ಟೋಮಾನಕೆ ಯೋಚಿಸೀದೆ ಸಖಿಯೋ । ಸಿಷ್ಟಾಂಗ ನಿನ್ನಾದರಾ ॥ ಘಟ್ಯಾಗೆನ್ನದು ಗಾರುಮಾಡಿದೆ ಬಲೂ । ಸಿಟ್ಟಾಗಿ ನಿನ್ನಾತು ರಾ ॥ ಬಿಟ್ಟಾರಾಗದು ಬಯಕೆತೀರದು ಮನಾ । ಮುಟ್ಯಾಗೊ ಪಂಪೇಳುವೆ ॥ ಪಟ್ಟಾದಾಸುದತೀ ಗೃಹಾಂತರಕೆ ನೀ । ಮುಟ್ಟಿದರೆ ಸುಖಬಾಳುವೇ ॥ ೧ ॥

ರಾಗ ಸೌರಾಷ್ಟ್ರ, ರೂಪಕತಾಳ.

ಚಂದ್ರಗಾವಿಯನುಟ್ಟು ಚಲುವಕುಪ್ಪಸ ತೊಟ್ಟು । ಚಂದವಾದೊಸ್ತು ಗಳ ಚಪಲಾಕ್ಷಿಯಿಟ್ಟು ॥ ಅಂದಣವನೇರಿ ನಲುವಿಂದ ಸಂಭ್ರಮದಿಂದ । ಇಂದುಮುಖಿ ರುಕ್ಮಿಣಿಯ ಮಂದಿರಕೆ ಪೋಗೆ ॥ ೧ ॥ ತಂಗಿ ಬಂದಾ ಳೆಂದು ತರಳಾಕ್ಷಿರುಕ್ಮಿಣಿ । ಅಂಗಳಕೆ ಬಂದು ಆಲಿಂಗನವ ಕೊಡುತಾ ॥ ಮುಂಗೈಯಪಿಡಿದು ಮೋಹಿಸಿಮುದ್ದೆ ಬಾರೆಂದು । ಶೃಂಗಾರಹರ್ಮ್ಯ ದಲಿ ಶೀಘ್ರದಲಿ ಪೋಗೇ ॥ ೨ ॥ ಕುಡುತೆಗಂಗಳೆ ತಂಗಿ ಕುಡುರೆ ಗದ್ದುಗೆ ಮೇಲೆ । ಸಡಗರದಿ ನುಡಿಯಲ್ಕೆ ಸತ್ಯಭಾಮಾ ॥ ಮಡದಿಮಣಿ ರುಕ್ಮಿ ಣಿಗೆ ವಂದಿಯನು ಬಾಗುತಾ । ಕಡುಚೆಲ್ವೆ ಕುಳಿತಳಾಕಾಂತೆ ಗುಣ ವಂತೆ ॥ ೩ ॥ ಶ್ರೀಃ ॥

ಶ್ಲೋಕ: — ನಾರೀ ಕೇಳೆನ್ನನಂಗನಯ್ಯನ ಬಗೇ। ವಾರಿಧಿಯು ನೆಲೆ ತಿಳಿವದೆ। ವಾರೀಜಾಸನ ಗಾರುಗೊಂಡನು ಅಹಂ। ಕಾರದಲಿ ಘನಬರುವದೇ॥ ತೋರೂವಾಜಗ ತೋಯಜಾಕ್ಷನು ಕಣಾ। ಆರೊಡನೆ ನೀ ಗರ್ವಿಪೆ॥ ಸಾರಾಸಾರವಿಚಾರ ತಿಳಿದು ನಿರಹಂ। ಕಾರದಲಿ ನೀ ಶೋಭಿಪೆ॥ ೧॥

ರಾಗ ಪಾಡಿ, ಆದಿತಾಳ.

ಸ್ವಾಮಿ ಬಂದಾ। ಮೇಘಶ್ಯಾಮ ಬಂದಾ। ಭಾಮೆರುಕ್ಮಿಣಿಯು ಕೂಡೊ ಪ್ರೇಮವ ನೋಡಲಿಕೆ ॥ ಪಲ್ಲ ॥ ವಾರಿಜಾಕ್ಷನು ಬಂದಾ। ವಾರಿಧೀಶಯನ ಬಂದಾ ॥ ಮಾರನಯ್ಯನು ಬಂದಾ ಮಾಧವ ಬಂದಾ ॥ ೧ ॥ ಮಂಗಳಮಹಿಮಾ ಬಂದಾ। ಮಾಯಾದೂರನು ಬಂದಾ ॥ ರಂಗನಾಥ ಸುರರಾರಾಯನು ಬಂದಾ ॥ ೨ ॥ ಮುದ್ದುಕೃಷ್ಣನು ಬಂದ। ಮುನಿಜನ ಪ್ರಿಯ ಬಂದ। ಶುದ್ಧಸತ್ವದ ಅನಿರುದ್ಧ ಬಂದಾ ॥ ೩ ॥ ಶ್ರೀಃ ॥

ಶ್ಲೋಕ: — ನಾರೇರಿಬ್ಬರು ನಾಥನಂಘ್ರಿಗೆರಗೀ। ಪೂರೈಸಿ ದಿವ್ಯಾಸನಾ ॥ ಸಾರಸ್ಯಾದಲಿ ಸವತಿಮತ್ಸರವನೂ। ತೋರದಲೆ ಸರ್ವೇಶನಾ ॥ ಮೋರೇನೋಡುತ ಮೋಹವೆರಸಿ ನುಡಿಯೇ। ಈರಮ್ಯವನು ನೋಡುತಾ। ನೀರಾಜಾಕ್ಷನನೇಕ ಸಂಭ್ರಮದಲೀ। ನಿಜವಾಕು ತೋರ್ಯಾಡುತಾ ॥ ೧ ॥

ರಾಗ ಭೈರವಿ, ಅಟತಾಳ.

ಮೊದಲಿಗೆ ಈಬುದ್ಧಿ ಮೊಳೆದೋರದಾಯಿತೆ। ಸತ್ಯಭಾಮೆ ॥ ನಿನ್ನ। ಕದನಕಂಜಿದೆನಲ್ಲೆ ಕಾಂತೆಶಿರೋಮಣಿ। ಸತ್ಯಭಾಮೆ ॥ ೧ ॥ ಇನ್ನನ್ನಾಈಸ್ನೇಹಾ ಯರವುಮಾಡಲಿಬೇಡ। ಸತ್ಯಭಾಮೆ ॥ ರನ್ನೆರುಕ್ಮಿಣಿಯೊಳು ರಂಜಿಸು ಧರೆಯೊಳು। ಸತ್ಯಭಾಮೆ ॥ ೨ ॥ ಎರಡುಕಡೆಗೆ ಸಿಲ್ಕಿಯೆರವುದೋರಿತು ಮನ। ಸತ್ಯಭಾಮೆ ॥ ಹರುಷವಾಯಿತು ಇಂದು ಹರಿಣಾಕ್ಷಿ ಸುಖಬಾಳೂ। ಸತ್ಯಭಾಮೇ ॥ ೩ ॥ ಪಿರಿಯಾಳ ಮಾತಿಗೆ ಪೆಡಸುಮಾಡಲಿಬೇಡ। ಸತ್ಯಭಾಮೆ ॥ ಕಿರಿಯತನದಿ ಬಾಳೆ ಕಿಂಚಿತ್ತು ಕಡಿಮಿಲ್ಲ ಸತ್ಯಭಾಮೆ ॥ ೪ ॥ ಶ್ರೀಃ ॥

**ಶ್ಲೋಕ:**— ನಾರೀರುಕ್ಮಿಣಿ ಕೇಳು ನಾನು ನುಡಿವಾ । ಸ್ವಾರಸ್ಯದಾ ವಾಕ್ಯವಾ ॥ ಈರಾಜ್ಯಾಭಿವಿಲಾಸ ಸಂಭ್ರಮುವನೂ ಇಂದಾಯಿತೀ ಸೌಖ್ಯವಾ ॥ ನಾರೀರಿಬ್ಬರು ನಿತ್ಯನೂತನವಹಾ । ನಿರ್ಮಳದ ಮನದಿಂದಿರೆ । ಮೂರೂಲೋಕಕೆ ಮುದ್ದುಮುದವು ಎನಗೇ । ವಾಂಛಿಸಿಗುಣಮಂದಿರೇ ॥ ೧ ॥

ರಾಗ ಭೈರವಿ, ಆದಿತಾಳ.

ಬಿಂದು ಮಡಿಯನುಟ್ಟು ಮಿಗಿಲಾದ ಹರುಷದಿ । ಇಂದುಮುಖಿ ರುಕ್ಮಿಣಿಯು ತಾ ॥ ನಂದನಂದನಗೆ ಆರೋಗಣೆಮಾಡೆಂದು । ವಂದಿಸಿ ನಲುವಿಂದಾ ಚಂದ ॥ ೧ ॥ ತ್ವರಿತ ದೂತಿಯುತರ್ಾರತ್ನಮ್ಯಗಳಿಂದ । ಮರಕತ ಮಣಿಮಯ ಗದ್ದಗೆ ॥ ಧರೆಯಲಿ ಪೊಂದಿಸಿ ದಾಸ್ಯಭಾವಗಳಿಂದ । ಮೆರೆವ ಜ್ಯೋತಿಯ ನಿಲಿಸೀ ಬಲಿಸಿ ॥ ೨ ॥ ಸತ್ಯಭಾಮೆಯು ಕೃಷ್ಣ ಸಮವಾಗಿ ಕುಡುರಲು । ಮುತ್ತಿನ ಸೇಸೆಯನಿಡುತಲಿ ॥ ಸತ್ವರದಲಿ ಸ್ವರ್ಣಪಾತ್ರೆಯ ತಂದಿಟ್ಟು । ಚಿತ್ತದಿ ನಲಿನಲಿದೂ ವಲಿದೂ ॥ ೩ ॥ ಲಾವಣ್ಯಾಂಗನೆ ಲವಣವು ಮೊದಲಾದ । ಪಾವನಪಾಕ ಖಜ್ಜಾಯಗಳೂ ॥ ಶಾವಿಗೆ ಪರಡಿಗೌಲಿಯ ಪರಮಾನ್ನವು । ದೇವದೇವಗೆ ನೀಡೀ ಪಾಡಿ ॥ ೪ ॥ ಗಾರಿಗೆ ಸವಿಬೀಸೂರಿಗೆ ಮಂಡಿಗೆ । ವಾರಣವಾದ ಭಕ್ಷಗಳಿಂದಾ ॥ ವಿಾರಿದ ಪರಿತೋಷದಿ ವೃಷ್ಟಾನ್ನವು । ಸಾರರುಚಿಗಳಾಧಾವೋಬಾ ॥ ೫ ॥ ಅಂಚೆಗಮನೆಯರು ಪಂಚಾಮೃತಗಳ । ಮಿಂಚುವ ಪಾತ್ರೆಯೊಳಿಡುತಲಿ ॥ ಪಂಚಾನನ ಪ್ರಿಯ ಪಾಲಿಸೆಂದೆನುತಲಿ । ಪಂಚಶರನ ಮಾತೆ ಖ್ಯಾತೆ ॥ ೬ ॥ ವಿಂದೆಭದ್ರೆ ಕಾಳಿಂದಿ ಜಾಂಬವತಿ । ನಿಂದಳು ನೀಲೆ ಮಿತ್ರೆಯುಗೂಡಿ ॥ ಸಂದಿಸಿ ಲಕ್ಷಣೆ ಸಾರಿಸವಿಾಪದಿ । ಮುಂದುವರಿದುಬಂದು ನಿಂದು ॥ ೭ ॥ ಮಂದಹಾಸದಿ ಗೋವಿಂದ ಕರೆಯಲೂ । ವೃಂದಮಾನಿನಿಯರ ಬಳಿಯಲೀ ॥ ಇಂದಿರೆಯನುಗೂಡಿ ಇಂಪಿನಾರೋಗಣೆ । ಮಂದರಧರಮಾಡೀ ಕೂಡಿ ॥ ೮ ॥ ಶ್ರೀಃ ॥

## ಸೀಸಪದ್ಯ.

ಕರಶುದ್ಧವನೆಮಾಡಿ ಕರಿರಾಜವರದನೂ । ವರರತ್ನಮಾಣಿಕವ ಒಪ್ಪು ವಂಥ ॥ ಸ್ಥಿರವಾದ ಪೀಠದಲಿ ಸಿರಿನಾಥ ಕೂಡಿರಲು । ನೆರದು ಸತಿಯರು ತಾವು ನಿಂದು ಶಾಂತ ॥ ಗುರುವಿಕೆಯ ರುಕ್ಮಿಣಿಯು ಗಮಕದಲಿ ಕರ್ಪು ರದ । ಮೆರವ ವೀಳ್ಯವನಿತ್ತು ಮಿಸುಪವಂದ ॥ ಹರುಷದಿಂದಲಿ ನುಡಿದು ಸರಿಯಾಗಿ ಪುಷ್ಪವನು । ಸತ್ಯಭಾಮೆಗೆ ಕೊಟ್ಟು ಸರಸದಿಂದ ॥ ೧

## ರಾಗ ಶಂಕರಾಭರಣ, ಆದಿತಾಳ.

ಹದಿನಾರುಸಾವಿರದಾ ಹರಿಣಾಕ್ಷೀಯರ ತಂದು । ಮುದದಿಂದಲಿ ಬೇಗ ಮುನಿಗಳನೆರಹಿದ । ಮದುವೆಯಮಾಡಲಿಕೇ ॥ ೧ ॥ ಸಕಲರಾ ಯರು ಬಂದೂ। ಪ್ರಕಟಕಪ್ಪವ ತಂದು । ಭಕತರು ಮಣಿಮಯ ಮುಕು ಟದಿ ಬಾಗುತ । ಮಕರಕುಂಡಲಧರಗೇ ॥ ೨ ॥ ದ್ವಾರಕಾಪುರದೊಳಗೇ ಭೂರಿವಾದ್ಯಗಳಿಂದ । ವಾರಿಜಾನಾಭನ ವರಮಹೋತ್ಸವವೆಂದು । ಸಾ ರಿತು ಸಂಭ್ರಮದೀ ॥ ೩ ॥ ವೇದಘೋಷಣೆಯಿಂದಾ ಸಾಧಿಸೀ ಲಗ್ನ ವನೂ । ಮಾಧವ ಮದುವೆಯ ಕೈಕೊಳಲಮರರು । ಮೋದ ಪೂಮಳೆ ಗರೆಯೇ ॥ ೪ ॥ ಊಟಣೇಯೊಳು ವಿಶ್ವನಾಟಕನೂ ಸತಿಯರಿಗೆ ॥ ನೀಟಾದ ರೂಪವ ಬೇರೆಬೇರೆ ತೋರೀ । ಕೋಟಿಭಾನುತೇಜ ॥ ೫ ॥ ರಾಜಗೋಪಾಲನಾ ರಾಜಮಂದಿರದಲ್ಲಿ । ಸುಜನರೆಲ್ಲರು ಭೋಜನ ಮಾಡುವ । ಸೋಜಿಗವಳವಡದೂ ॥ ೬ ॥ ಎಣಿಕೆಯಿಲ್ಲದ ದ್ವಿಜರೂ ಗುಣವುಳ್ಳ ಭೂಭುಜರೂ ॥ ಮಣಿಮಯದೊಡವೆಯ ಮಂಗಳಮಯ ವಾಗಿ । ವಿನಯದಿ ಒಪ್ಪಿದರೂ ॥ ೭ ॥ ಶ್ರೀಃ ॥

## ಮಂಗಲಪದ.

ಮಂಗಳ ಮಾರಮಣ ಮುಕುಂದಗೆ। ಮಂಗಳ ಮಾರಾಂತರ ಗೆದ್ದಗೆ। ಮಂಗಳಮಂಗಜನಾ । ಜನಕಾಗೆ॥ ಶೋ ॥ ಜನಕಾಗೆ ಜಾಹ್ನವಿಪಿತನಿಗೆ। ಅಂಗಾನೆರೆಲ್ಲಾ । ಬೆಳಗೂತ॥ ಶೋ ॥ ೧ ॥ ಶೋಭನ ಸುರವರನಾದಗೆ।

ಶೋಭನ ಸುಂದರಗುಣಖ್ಯಾತಗೆ । ಶೋಭನ ದೇವಕಿಯಾ ಸುತನಿಗೆ ॥ ಶೋ ॥ ಸುತನಿಗೆ ಸುಜನರ ಹಿತನಿಗೆ । ಸಾಭಿಲಾಷೆಯುರು ಬೆಳಗೂತಾ ॥ ॥ ಶೋ ॥ ೨ ॥ ಮಂದರಧರ ಮನುಜವತಾರಗೆ । ಇಂದಿರೆಪತಿ ನಂದನ ಕಂದಗೆ । ಸಿಂಧುಶಯನನಿಗೆ ಸಿರಿಧರಗೇ ॥ ಶೋ ॥ ಸಿರಿಧರಗೆ ವಂದಿತ ರೊಡೆಯುಗೆ । ಇಂದುಮುಖಿಯುರು ಬೆಳಗೂತ ॥ ಶೋ ॥ ೩ ॥ ನೀರೊಳು ವಿಹಾರವಮಾಡ್ದಗೆ । ಭಾರವ ಬೆನ್ನಿಲಿ ಪೊತ್ತಾತಗೆ । ಧಾರುಣಿದಂತ ವಲಿ ಧರಿಸಿದಗೆ ॥ ಶೋ ॥ ಧರಿಸಿದಗೆ ಬಾಲನ ಪೊರದಗೆ । ವಾರಿಜಾಕ್ಷಿ ಯರೂ । ಬೆಳಗೂತ ॥ ಶೋ ॥ ೪ ॥ ವಾಮನಗೆ ಭಾರ್ಗವರಾಮಗೆ । ಕಾ ಮಿನಿಯರ ಕರುಣದ ಸೋಮಗೆ । ಆಮುಪ್ಪುರವನೂ ಗೆಲೀದವಗೆ ॥ ॥ ಶೋ ॥ ಗೆಲಿದವಗೆ ಗೆಲಿದಗೆ ಹಯವೇರೀ ನಲಿದಗೆ । ಭಾವೆಯರೆಲ್ಲರು ಬೆಳಗುತ ॥ ಶೋ ॥ ೫ ॥ ಎರಡನೇ ವೈಕುಂಠವು ಕನಕಾಗಿರಿಯಾಳುವ ಪರಿಪರಿವಿಭವದಿ । ಮೆರವ ನರಸಿಂಗಾ ಭವಭಂಗ ॥ ಶೋ ॥ ಭವಭಂಗಾ ಸದ್ಗುಣತುಂಗಾ । ಗರಸಿಯರೆಲ್ಲ ಬೆಳಗೂತ ॥ ಶೋ ॥ ಶುದ್ಧಾತ್ಮಕ ಸುಜನರ ಪೋಷಕ । ಹೊದ್ದಿದ ಜನಜಾಲವಪಾಲಕ । ಮುದ್ದುಶೋಭಿ ಸುವ । ಗರುಡಾನಾ ॥ ಶೋ ॥ ಗರುಡನ ಪೆಗಲಲ್ಲಿ ಮೆರವಾ । ಶುದ್ಧ ಶಾಶ್ವತಗೆ ಬೆಳಗೂತ ॥ ಶೋ ॥ ೬ ॥ ಶ್ರೀಃ ॥

ಶೋಭನವೆ ಶೋಭನವೆ । ಶೋಭಿತ ಕನಕಾದ್ರಿವಾಸನಿಗೆ ॥ ಪಲ್ಲ ॥ ಧರೆಯೊಳು ರಾಯಚೂರಸೀಮೆಯೊಳೂ । ವರದಪರಾಲ ತಮ್ಮಣ್ಣನು ॥ ವಿರಚಿಸಿ ಪಾರಿಜಾತವು ಕೊರವಂಜಿಯು । ಸಿರಿಸತ್ಯಭಾಮೆಗೆ ತ್ಯಾಗ ವನೂ ॥ ಶೋ ॥ ೧ ॥ ಬೇಡಲು ಬೀಗರಿತ್ತಪೊದಿಕೆ । ಆಡಲು ಭೋಜನ ನೀಡೆನುತ ॥ ಮಾಡಿದ ವಚನದಿ ಮುಂದಕೆಮಾಡದೆ । ನಾಡೊಳು ಪಸ ರಿಸಿತೀಕಾವ್ಯ ॥ ಶೋ ॥ ೨ ॥ ಅಲ್ಲಿಹಪುರದ ಭೀಮನು ದಾಸಾ । ಸುಲಭ ತನದಿ ಪಾಠವಮಾಡಿ ॥ ಎಲ್ಲಾನಾಡೊಳು ಕೀರ್ತಿಸ್ಥಿಸುವ ಕನಕಗಿರಿ । ಎಲ್ಲಿ ಬರಲು ಕಾಲೋಚಿತದೀ ॥ ಶೋ ॥ ೩ ॥ ಮಂಗಳಮಹಿಮ ಶ್ರೀನರ ಹರಿಯಾ । ಹಿಂಗಾದೆ ಭಜಿಸುವ ಹರಿದಾಸ ॥ ರಂಗಭೂಪಾಲನು ರಸಿಕ

ವಿಚಾರಿಸಿ । ಮುಂಗೊಳಿಸೆಂದು ಬುದ್ಧಿಯ ಕೊಡಲೂ ॥ ಶೋ ॥ ೪ ॥
ಪಾರಿಜಾತವು ತಂದ ಪರಿಯಾಯೂ । ಸಾರಭಾಗವತ ಕ್ರಮದಿಂದ ॥
ಪೂರಣವಾಯಿತು ಹೇಳುವ ಕೇಳುವ । ಸ್ವಾರಸ್ಯದವರಿಗೆ ಸಂಪದವೂ ॥
ಶೋ ಶೋ ॥ ೫ ॥ ಶ್ರೀಃ ॥

ಇತಿ ಶ್ರೀಕೃಷ್ಣಪಾರಿಜಾತವು ಸಂಪೂರ್ಣ.

॥ ಶ್ರೀಕೃಷ್ಣಾರ್ಪಣಮಸ್ತು ॥



ಈ ಪುಸ್ತಕವು

ಪಾವಂಜೆ ಗುರುರಾವ್,

ಇವರ

ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ

ಮುದ್ರಿಸಲ್ಪಟ್ಟು,

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ

ಪ್ರಕಟಿಸಲ್ಪಟ್ಟಿತು.

ಶಾ. ಶಕ. ೧೮೪೭.

